

# ಸಿದ್ಧಗಂಗಾ



ಸಂಪುಟ : ೩೯ ಜುಲೈ ೨೦೦೩ ಸಂಚಿಕೆ : ೭



ಜೂನ್ ೨೮ರಂದು ತುಮಕೂರಿನಲ್ಲಿ ನಡೆದ ಹಿರೇಮಠಾಧ್ಯಕ್ಷರಾದ ಡಾ. ಶ್ರೀ ಶ್ರೀ ಶಿವಾನಂದ ಶಿವಾಚಾರ್ಯ ಸ್ವಾಮಿಗಳ ಶ್ರೀಗುರು ಪಟ್ಟಾಧಿಕಾರ ಮಹೋತ್ಸವದ ಐದನೆಯ ವಾರ್ಷಿಕೋತ್ಸವ ಸಮಾರಂಭವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀ ಶೈಲ ಜಗದ್ಗುರು ಶ್ರೀ ಶ್ರೀ ಉಮಾಪತಿ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು, ಉನ್ನತ ಶಿಕ್ಷಣ ಸಚಿವ ಡಾ. ಜಿ. ಪರಮೇಶ್ವರ್, ಲೋಕಸಭಾ ಸದಸ್ಯ ಶ್ರೀ ಜಿ.ಎಸ್. ಬಸವರಾಜ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ದೇವನಹಳ್ಳಿಯಲ್ಲಿ ಏರ್ಪಡಿಸಿದ್ದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗುರುವಂದನ ಹಾಗೂ ಬಸವ ಜಯಂತಿ ಕಾರ್ಯಕ್ರಮವನ್ನು ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಅವರು ಉದ್ಘಾಟಿಸಿದರು.



ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ನೂತನ ಗ್ರಂಥಾಲಯವನ್ನು ಉದ್ಘಾಟಿಸಿದರು.



ಮುಖಪುಟ
ಪರಮಪೂಜ್ಯ ಶ್ರೀ ಶ್ರೀಗಳವರು
ಭಾಗವಹಿಸಿದ ವಿವಿಧ
ಸಮಾರಂಭಗಳು


ಪ್ರಧಾನ ಸಂಪಾದಕ
ಪ. ಚೆನ್ನಪ್ಪ ಎರೇಸೀಮೆ

ಸಂಪಾದಕ
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ
ಎಚ್.ಎಸ್. ಸಿದ್ದಗಂಗಪ್ಪ

ಸಂಚಾಲಕರು
ಎಂ. ರೇಣುಕಾರಾಧ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ದಗಂಗಾ ಮಠ,
ತುಮಕೂರು ಜಿಲ್ಲೆ – ೫೭೨ ೧೦೪

ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು – ೫೬೦ ೦೫೪.
ದೂರವಾಣಿ : ೩೬೦೪೮೦೮೭


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯ ನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ


ಸಂಪುಟ : ೩೯ | ಜುಲೈ ೨೦೦೩ | ಸಂಚಿಕೆ : ೭


## ಒಳಪುಟಗಳಲ್ಲಿ ..........


೨. ಸಂಪಾದಕೀಯ
೩. ಶ್ರೀವಾಣಿ
೪. ಸಿದ್ಧಲಿಂಗೇಶ್ವರ ವಚನ – ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ
೫. ನರನು ಹರನಾದ ಬಗೆ – ಪ್ರೊ. ಕೆ.ಎಂ. ಮರಿಸ್ವಾಮಿ
೮. ವಚನಗಳ ವಿಶ್ಲೇಷಣೆ – ಸಂ. ಡಾ. ಎಲ್. ಬಸವರಾಜು
೯. ಸ್ವರ ವಚನಗಳು – ಡಾ. ಮಲ್ಲಿಕಾರ್ಜುನ ಶಿವಪ್ಪ ಲತ್ತೆ
೧೩. ಅಕ್ಕಮಹಾದೇವಿ – ಪ್ರೊ. ಹೆಚ್.ಎಂ. ಬೀಳಗಿ
೧೭. ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ – ಹೀ.ಚಿ. ಶಾಂತವೀರಯ್ಯ
೨೦. ನೇತ್ರಭಾಸ್ಕರ ಡಾ. ಕೆ.ಟಿ. ಸುರೇಂದ್ರ
೨೩. ಮಹಿಳಾ ಸಾಹಿತ್ಯ : ಒಂದು ಅವಲೋಕನ – ಪ್ರೊ. ದಾಕ್ಷಾಯಣಮ್ಮ
೨೬. ಸಮಾರಂಭ
೨೯. ಕ್ಷೇತ್ರವಾರ್ತೆ



| ವಿಳಾಸ : | ಚಂದಾ ವಿವರ : | |
|---|---|---|
| "ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ | ವಾರ್ಷಿಕ ಚಂದಾ | ರೂ. ೧೦೦/– |
| ಶ್ರೀ ಸಿದ್ಧಗಂಗಾ ಮಠ, | ಆಜೀವ ಸದಸ್ಯತ್ವ | ರೂ. ೬೦೦/– |
| ತುಮಕೂರು ಜಿಲ್ಲೆ – ೫೭೨ ೧೦೪ | ಬಿಡಿ ಪ್ರತಿ | ರೂ. ೧೫.೦೦ |



## ಅಕ್ಷರ ದಾಸೋಹ ....

ದಾಸೋಹ ಪರಿಕಲ್ಪನೆ ಶರಣರು ಜಗತ್ತಿಗೆ ಕೊಟ್ಟ ಬಹುದೊಡ್ಡ ಜೀವನ ತತ್ವ, ಅವರು ಶಾಸ್ತ್ರದಲ್ಲಿ, ವೇದಗಳಲ್ಲಿ, ಪುರಾಣಗಳಲ್ಲಿ ಕಾಣಲಾಗದ ದೇವರನ್ನು ''ತ್ರಿವಿಧ ದಾಸೋಹ''ದಲ್ಲಿ ಕಂಡರು. ದಾಸೋಹಂ ಎಂಬುದು ಅಹಂ, ಸೋಹಂಗಳಿಗಿಂತ ಸರ್ವಶ್ರೇಷ್ಠವಾದದ್ದು ಎಂದು ನಂಬಿ ನಡೆದರು. ದಾಸೋಹದಲ್ಲಿ 'ಕರ್ತ' ಭಾವವನ್ನು ಲಯಗೊಳಿಸಿಕೊಂಡು 'ಸಮರ್ಪಣ' ಭಾವದಲ್ಲಿ ಸಂತೃಪ್ತಿಯನ್ನುಂಡು ಸುಖಿಸಿದರು. ದಾಸೋಹವೆಂಬುದು ಮಾನವೀಯತೆಯ ಪರಮಾರಾಧನೆ ಎಂದು ಪರಿಭಾವಿಸಿ ಆಚರಣೆಗೆ ತಂದರು.

ಅನ್ನವಾಗಲೀ ಅಕ್ಷರವಾಗಲೀ ಅರ್ಪಣಾಭಾವ ಪವಿತ್ರವಾಗದೆ ಅವಾಂತರ ಮುಕ್ತವಾಗದು. ಸರ್ಕಾರದ ಯೋಜನೆ ಶ್ಲಾಘನೀಯವಾದುದು. ಎಳೆಯ ಮಕ್ಕಳ 'ಹೊಟ್ಟೆ'ಯ ದರ್ಶನ ಕಂಡುಕೊಂಡಿರುವಂಥದ್ದು. ಹಸಿದ ಹೊಟ್ಟೆಗೆ ತತ್ವಜ್ಞಾನದ ಬೋಧನೆ ಅಲ್ಲ, ಅನ್ನ-ಅದನ್ನರಿತು ಸರ್ಕಾರ 'ಅಕ್ಷರ ದಾಸೋಹ' ಯೋಜನೆಯನ್ನು ಜಾರಿಗೆ ತಂದಿರುವುದು ಸ್ವಾಗತಾರ್ಹ. ಯೋಜನೆಯನ್ನು ಕಾರ್ಯಶೀಲವಾಗಿಸುವ ಹಂತದಲ್ಲಿ ನೂರಾರು ಅವಾಂತರಗಳು. ಅವುಗಳಿಗೆ ಮೂಲ ಕಾರಣ 'ಮನಸ್ಸು'. ಯೋಜನೆಗೆ ಸರಬರಾಜುಮಾಡುವ ಅಕ್ಕಿ, ಧಾನ್ಯ ಪರಿಕರಗಳಲ್ಲಿನ ದೋಷ, ಅವುಗಳನ್ನು ಉಪಯೋಗಿಸಲು ಬೇಕಾದ ಪಾತ್ರೆ, ಪರಡಿಗಳ ಅಭಾವ, ಸ್ಥಳಾಭಾವ, ಎರಡು ಮೂರು ಶಾಲೆಗಳಿಗೆ ಒಂದೇ ಕೇಂದ್ರದಿಂದ ಸಿದ್ಧಗೊಳಿಸಿದ ಆಹಾರವನ್ನು ಸಾಗಣೆ ಮಾಡುವಲ್ಲಿನ ಕುಂದುಕೊರತೆಗಳು, ಸರಿಯಾಗಿ ಬೇಯಿಸದ ವಿಧಾನ, ಎಲ್ಲಕ್ಕೂ ಹೆಚ್ಚಿನದಾಗಿ ನಮಗೆ ಅಸ್ಥಿಗತವಾಗಿ ಅಂಟಿಕೊಂಡಿರುವ ಅಸ್ಪೃಶ್ಯತೆಯೆಂಬ ಅರ್ಬುದರೋಗ ಇದೆಲ್ಲವುಗಳಿಂದ ಯೋಜನೆ ಟೀಕೆ ಟಿಪ್ಪಣಿಗಳಿಗೆ, ರಾಜಕೀಯ ಪಕ್ಷಗಳ ಸ್ವಲಾಭಕ್ಕೆ 'ವಸ್ತು'ವಾಗುತ್ತಿರುವುದು ಒಳ್ಳೆಯದೆನಿಸುವುದಿಲ್ಲ. ಯೋಜನೆಯ ಲೋಪದೋಷಗಳಿಗೆ ಕೇವಲ ಅಧಿಕಾರಿಗಳನ್ನೇ ಗುರಿಮಾಡಿದರೆ ಸಾಲದು. ಸಾರ್ವಜನಿಕರ, ಶಾಲಾಭಿವೃದ್ಧಿ ಸಮಿತಿಗಳ, ಮಕ್ಕಳ ಕಲ್ಯಾಣಕಾಂಕ್ಷಿಗಳೆಲ್ಲರ ದಾಸೋಹಂಭಾವದ ಸಹಕಾರ ಮುಖ್ಯ. ಸುದ್ದಿ ಮಾಧ್ಯಮಗಳೂ ಸಹ ಕೇವಲ ಯೋಜನೆಯ ಕುಂದು ಕೊರತೆಗಳ ಮುಖವನ್ನೇ ಏರುಬೆಳಕಿನಲ್ಲಿ ಪ್ರಚುರಪಡಿಸಿದರೆ ಸಾಲದು, ಯೋಜನೆಯ ಗುಣವೃದ್ಧಿಗೆ, ಯಶಸ್ಸಿಗೆ ಏನು ಮಾಡಬಹುದೆಂಬುದನ್ನು ಸಲಹಾ ರೂಪದಲ್ಲಿ ಪ್ರಮುಖ ಸುದ್ದಿಯೆಂಬಂತೆ, ತಜ್ಞರ ಅಭಿಪ್ರಾಯಗಳೊಡನೆ, ಸಾರ್ವಜನಿಕರ ಅಭಿಪ್ರಾಯಗಳ ಸಮೇತ ಪ್ರಕಟಿಸುವುದಾಗಬೇಕು.

ಗ್ರಾಮಾಂತರ ಪ್ರದೇಶಗಳಲ್ಲಿರುವ ಯುವಜನತೆ ಇತ್ತ ಗಮನ ಹರಿಸಬೇಕು. ಗ್ರಾಮಪಂಚಾಯತಿಗಳು ನಿಗಾವಹಿಸುವುದಾಗಬೇಕು. ಶಾಲಾಶಿಕ್ಷಕರ ಸಹಕಾರವಂತೂ ಅತ್ಯಗತ್ಯ. ಊಟಮಾಡಿದ ಮಕ್ಕಳ ಆನಂದದಲ್ಲಿ ತಮ್ಮ ಶಿಕ್ಷಕತ್ವದ ಸಾರ್ಥಕತೆಯನ್ನು ಕಾಣುವ ಹೃದಯವಂತ ಶಿಕ್ಷಕ-ಶಿಕ್ಷಕಿಯರಿಗೇನೂ ಕೊರತೆಯಿಲ್ಲ. ಒಂದು ತುತ್ತು ಊಟಮಾಡಿದ ಮಗುವಿನ ಅರಳಿದ ಮುಖ ನೋಡಿದಾಗ ಆಗುವ ಅನುಭವಕ್ಕೆ, ಸಂತೋಷಕ್ಕೆ ಯಾವುದು ಸಾಟಿಯಾಗದು.

ಭ್ರಷ್ಟಾಚಾರ 'ಅಕ್ಷರ ದಾಸೋಹ'ದಂಥ ಪವಿತ್ರ ಯೋಜನೆಯಲ್ಲಿ ಸುಳಿಯಬಾರದು. ಸುಳಿಯುವುದು ಮಹಾಪಾಪ. ತಿನ್ನುವ ಮಕ್ಕಳ ಅನ್ನದಲ್ಲಿಯೂ ಭ್ರಷ್ಟಚಾರವಿರುವುದಾದರೆ ಅದಕ್ಕಿಂತ ಅಮಾನವೀಯತೆ ಇನ್ನೊಂದಿರಲಾರದು. ಆತ್ಮಸಾಕ್ಷಿಯಾಗಿ ಅಕ್ಷರ ದಾಸೋಹ ನಡೆಯಬೇಕು. ಅನ್ನಕೊಟ್ಟು ಅಕ್ಷರ ಕಲಿಸು ಎಂಬುದು ನಿತ್ಯಜಪವಾಗಲಿ ಎಂದು 'ಸಿದ್ಧಗಂಗಾ' ಪ್ರಾರ್ಥಿಸುತ್ತದೆ.

— ಸಂಪಾದಕ







## ಪ್ರಾರ್ಥನೆ : ಶಕ್ತಿ ಸಂಜೀವಿನಿ

ಪ್ರಾರ್ಥನೆ ಗಾಳಿ ನೀರು ಬೆಂಕಿಗಳಂತೆಯೇ ನಮಗೆ ಆವಶ್ಯಕ. ನಿಸರ್ಗ ಸಹಜವಾಗಿ ಸಕಲ ಚರಾಚರಜೀವ ಜಾಲಕ್ಕೆ ಬೇಕಾದ ಶಕ್ತಿ ಸಂಜೀವಿನಿ. ಅನ್ನದಿಂದ ದೇಹಬಲ. ಪ್ರಾರ್ಥನೆಯಿಂದ ಆತ್ಮಬಲ. ಪ್ರಾರ್ಥನೆಯ ಮಹತ್ವವನ್ನು ವಿವರಿಸಲಾಗದು. ಅದು ಮಾತುಮನಗಳನ್ನು ಮೀರಿದ್ದು. ಅನುಭಾವಕ್ಕೆ ಗೋಚರಿಸುವಂಥದ್ದು. ಪ್ರಾರ್ಥನೆಯಲ್ಲಿ ಸಾಮೂಹಿಕ ಪ್ರಾರ್ಥನೆ ವಿಶಿಷ್ಟವಾದುದು. ಪ್ರಜ್ಞಾದೀಕ್ಷೆಯನ್ನು ಸ್ವೀಕರಿಸುವಂಥದ್ದು. ಖಂಡತ್ವದಿಂದ ಅಖಂಡತ್ವದ ಕಡೆಗೆ ನಡೆಸುವಂಥದ್ದು. ಸಹಕಾರ, ಸೌಜನ್ಯ, ಸೇವೆಗಳಿಗೆ ಮಾನಸಿಕ ಸಿದ್ಧತೆಯನ್ನು ಅನುಗೊಳಿಸುವುದು ಅದರ ಧ್ಯೇಯ.

ಕ್ರಿಶ್ಚಿಯನ್ ಆಸ್ಪತ್ರೆಗಳಲ್ಲಿ ಒಂದು ಪದ್ಧತಿಯಿದೆ. ಪ್ರತಿದಿನ ಆಸ್ಪತ್ರೆಗೆ ಕರ್ತವ್ಯಕ್ಕೆ ಹಾಜರಾಗುವ ವೈದ್ಯರು, ನರ್ಸುಗಳು, ಸೇವಾ ಸಿಬ್ಬಂದಿಯವರೆಲ್ಲ ಒಂದು ಕಡೆ ಸೇರಿ ಯೇಸು ಕ್ರಿಸ್ತನನ್ನು ಪ್ರಾರ್ಥಿಸುತ್ತಾರೆ. ಅವರ ಪ್ರಾರ್ಥನೆ ಹೇಗಿರುತ್ತದೆಂದರೆ ಅವರ ಬಳಿಗೆ ಬರುವ ಪ್ರತಿಯೊಬ್ಬ ರೋಗಿಯ ಒಳಗೆ ಯೇಸುಕ್ರಿಸ್ತನಿರುವುದನ್ನು ಅವರು ಕಂಡು ಆ ರೋಗಿಯ ಉಪಚಾರವೇ ತಾವು ಮಾಡುವ ಅಂದಿನ ಪೂಜೆಯೆಂದು ನಂಬಿನಡೆಯುತ್ತಾರೆ. ಯೇಸುಕ್ರಿಸ್ತನಿಗೆ ಹತ್ತಿರವಾಗುತ್ತಾರೆ.

ಪ್ರತಿಯೊಬ್ಬ ಶಿಕ್ಷಕನೂ ತಾನು ಬೋಧನೆಗೆ ಪ್ರಾರಂಭಿಸುವ ಮೊದಲು ತನ್ನ ಬಳಿಗೆ ಅಥವಾ ತನ್ನೆದುರು ಕುಳಿತಿರುವ ಎಳೆಯ ವಯಸ್ಸಿನ, ನಿರ್ಮಲ ಮನಸ್ಸಿನ ಮಕ್ಕಳ ಮನದಲ್ಲಿ ದೇವರನ್ನು ಕಂಡು, ತಾನು ಅವರಿಗೆ ಬೋಧಿಸುವುದೇ ತಾನು ಮಾಡುವ ಪೂಜೆ, ಪಠ್ಯವಿಷಯವೇ ಪ್ರಾರ್ಥನಾ ಶ್ಲೋಕಗಳೆಂದು ಭಾವಿಸಿ ಬೋಧಿಸುವುದಾದರೆ ಅದಕ್ಕಿಂತ ಶ್ರೇಷ್ಠ ಪ್ರಾರ್ಥನೆಯಿಲ್ಲ. ಹಾಗೆಯೇ ಪ್ರತಿಯೊಬ್ಬರೂ ತಮ್ಮ ಕರ್ತವ್ಯದಲ್ಲಿ ಪವಿತ್ರಭಾವದಿಂದ ನಿರತರಾದರೆ ಅದೊಂದು ಉತ್ತಮ ಪ್ರಾರ್ಥನೆಯೆಂದು ಕರೆಯಬಹುದು. ಶರಣರು ಈ ದೃಷ್ಟಿಯಿಂದಲೇ ಹೇಳಿದ್ದು ''ಕಾಯಕವೇ ಕೈಲಾಸ''ವೆಂದು. ಅಡಿಗೆ ಮಾಡುವುದಾಗಲಿ, ಸೌದೆ ಒಡೆಯುವುದಾಗಲಿ, ಹೂ ಪತ್ರೆಗಳನ್ನು ತರುವುದಾಗಲಿ, ಕಸಗುಡಿಸುವುದಾಗಲಿ, ಶೌಚಾಲಯಗಳನ್ನು ತೊಳೆಯುವುದಾಗಲಿ, ಕಾಗದ ಪತ್ರಗಳನ್ನು ಟೈಪಿಸುವುದಾಗಲಿ, ಲಕೋಟೆಗಳಿಗೆ ಸ್ಟಾಂಪುಗಳನ್ನು ಅಂಟಿಸುವುದಾಗಲಿ, ದೇವಾಲಯಗಳಲ್ಲಿರುವ ಮೂರ್ತಿಗಳಿಗೆ ಅಲಂಕಾರ ಮಾಡುವುದಾಗಿರಲಿ, ರೈತನಾದವನು ಹೊಲ ಉಳುವುದಾಗಲಿ, ಬೇಸಾಯದ ನೇಗಿಲು, ರಂಟೆ, ಕುಂಟೆ, ಕುಳ, ಕುಡುಗೋಲು, ಗುದ್ದಲಿ, ಪಿಕಾಸಿಗಳನ್ನು ಒಪ್ಪವಾಗಿಟ್ಟುಕೊಳ್ಳುವುದಾಗಲಿ, ಎಮ್ಮೆಗಳನ್ನು ಆರೈಕೆ ಮಾಡುವುದಾಗಲಿ, ಗೃಹಿಣಿಯಾದವಳು ಮನೆವಾಳ್ತೆಯನ್ನು ನಿರ್ವಹಿಸುವುದಾಗಲಿ – ತಮ್ಮ ಕಾಯಕದಲ್ಲಿ ದೇವರದರ್ಶನವನ್ನು ಮಾಡಲು ಪ್ರಾರ್ಥನೆ ಸಹಾಯಕವಾಗುತ್ತದೆ. ನೊಂದು ಬೆಂದ ಮನಸ್ಸಿಗೆ ತಂಪೆರೆಯುತ್ತದೆ. ದಿನ ದಿನವೂ ಜೀವಿಸುವುದಕ್ಕೆ ಗಾಳಿ ನೀರು ಅನ್ನವೆಷ್ಟು ಮುಖ್ಯವೋ ಅಷ್ಟೇ ಮುಖ್ಯ ಪ್ರಾರ್ಥನೆಯೂ ಕೂಡ.

ಪ್ರಾರ್ಥನೆ ಮೌನರೂಪಿಯಾದಾಗ ಧ್ಯಾನವಾಗುತ್ತದೆ. ನಿಶ್ಯಬ್ದರೂಪಿಯಾಗುತ್ತದೆ. ಮನಸ್ಸನ್ನು ಏಕಾಗ್ರಗೊಳಿಸುತ್ತದೆ. ಮನದ ಕೊನೆಯ ಮೊನೆಯ ಮೇಲೆ ತನ್ನ ದೇವರನ್ನು ಸ್ಥಾಪಿಸಿಕೊಳ್ಳುತ್ತದೆ. ಶಬ್ದಸಾಗರದ ಅಲೆಗಳೆಲ್ಲ ನಿಂತ ನಿಸ್ತರಂಗಕಾಸಾರ ಶಿವಧ್ಯಾನವೆನಿಸುತ್ತದೆ. ಶಬ್ದ ದೇಹಿಯಾದ ಪ್ರಾರ್ಥನೆ ನಿಶ್ಯಬ್ದ ಆತ್ಮವಾಗಿ ಶಿಶುಮುಗ್ಧ ನಿರ್ಮಲಾನಂದ ಲೋಕವಿಹಾರಿಯಾಗುತ್ತದೆ. ವ್ಯಷ್ಟಿಸೀಮೋಲ್ಲಂಘನಗೈದು ಸಮಷ್ಟಿರೂಪದ ಶಿವದರ್ಶನಾನಂದದಲ್ಲಿ ವಿರಮಿಸುತ್ತದೆ. ❄

ಓಂ



## ಶ್ರೀ ಸಿದ್ಧಲಿಂಗೇಶ್ವರ ವಚನ

*ಕುಂಡಲಿಯ ಒಲೆಯ ಭಾಂಡದಲ್ಲಿ ಮಂಡಿಸಿರ್ಪ*
*ತುಂಡುಮುಂಡುಕಾತಿ ಜಗವೆಲ್ಲ ಬಂಡುಮಾಡುತ್ತಿದ್ದಾಳೆ ನೋಡಾ*
*ಕುಂಡಲಿಯ ಬಲೆಯಲ್ಲಿ ಕೆಂಡವ ಚಾಚಲು*
*ಭಾಂಡವೊಡೆದು*
*ತುಂಡುಮುಂಡು ಕಾತಿಯ ತಾಮಸಬೆಂದು*
*ಕುಂಡಲಿ ಸರ್ಪನೆದ್ದು ಮುಂಡೆವಾಲನು ಮಡಿದುದ ಕಂಡೆನಯ್ಯಾ*
*ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ !*

ಅಜ್ಞಾನರೂಪವಾದ ಸ್ಥೂಲ ಸೂಕ್ಷ್ಮಕಾರಣತ್ರಯಗಳ ದೇಹವೆಂಬ ಪಾತ್ರೆಯಲ್ಲಿ ಪ್ರಾಪಂಚಿಕವಾದ ಅವಿದ್ಯಾಶಕ್ತಿ ಆಶ್ರಯಿಸಿದ್ದು, ಸಕಲಾತ್ಮರುಗಳನ್ನು ತನ್ನ ಪ್ರಪಂಚನಿಂದ ಕೊರತೆಗೊಳಗುಮಾಡುತ್ತಿರುವಳು. ಅಂತಹ ಅಜ್ಞಾನ ಸ್ವರೂಪರ ದೇಹದಲ್ಲಿ ಸುಜ್ಞಾನಾಗ್ನಿಯು ದೇಹಭಾವದಿಂದ ನಿವೃತ್ತಿಯಾಗಿ, ಪ್ರಪಂಚರೂಪಿಣಿಯಾದ ಅವಿದ್ಯೆಯೂ ಅಜ್ಞಾನವುದಹಿಸಿ, ಅಧೋಕಂಡಲಿಯು ಊರ್ಧ್ವಕಂಡಲಿಯಾಗಿ ಶಿರಪ್ರಧಾನವಾದ ಪರಶಿವ ಲಿಂಗದಲ್ಲಿ ಪರಮ ಪ್ರಸಾದಾಮೃತವ ಸ್ವೀಕರಿಸಿ, ಲಿಂಗದಲ್ಲಿ ಏಕಾರ್ಥ ಭಾವದೊಳಿದ್ದು ಸುಜ್ಞಾನರೂಪನಾದ ಶರಣನು ಜ್ಞಾನನೇತ್ರದಿಂದ ನಿದರ್ಶನಾದನು.

(ಕೃಪೆ : ಷಟ್‌ಸ್ಥಲಜ್ಞಾನಿ ಸೋಮಶೇಖರ ಶಿವಯೋಗಿ ಕೃತ ತೋಂಟದ ಸಿದ್ಧಲಿಂಗೇಶ್ವರನ ಷಟ್‌ಸ್ಥಲ ಜ್ಞಾನಸಾರಮೃತದ ಬೆಡಗಿನ ವಚನ ಟೀಕೆ – ವೀರಶೈವ ಅಧ್ಯಯನ ಸಂಸ್ಥೆ – ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಡಂಬಳ, ಗದಗ)

### ಶ್ರೀವಾಣಿ

*ಅಲ್ಪವಾದ ಫಲಾಪೇಕ್ಷೆಗೆ ಹೆಚ್ಚಿನ ಶ್ರಮ ಅತ್ಯಗತ್ಯವಾಗಿ ಬೇಕಾಗ ಬೇಕಾದರೆ ಪರಮಾತ್ಮ ಅಂಥ ಫಲದ ಸಾವಿರಾರು ಕೋಟಿಗಿಂತ ಮಿಗಿಲಾಗಿರುವಾಗ ಅಂತಹ ಉತ್ತಮ ಫಲಕ್ಕೆ ಸಾಧನೆಯನ್ನು ಎಷ್ಟು ಮಾಡಿದರೂ ಅಲ್ಪವೇ.*

## ಶ್ರೀ ಸಿದ್ಧಗಂಗಾ ಗುರುಕರುಣಾ ತ್ರಿವಿಧಿ

ನಿಮ್ಮ ಚರಣವ ಮುಟ್ಟಿ ಪರಮಸುಖಿಯಾಗಿರುವೆ
ನಿಮ್ಮ ಪ್ರಸಾದವ ಸವಿದುಂಡು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮಿಂದ ಹೆಸರಾಯ್ತು ದಾಸೋಹ ಕೈಂಕರ್ಯ
ನಿಮ್ಮಿಂದ ಆಚಾರ ಅಮರಾಯ್ತು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನದಿಂದಾಚಾರ ಜ್ಞಾನದಿಂದನುಭಾವ
ಜ್ಞಾನದಿಂದಲೆ ಘನದ ಪರನಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನಘನ ನೀನಾದೆ ತತ್ವ ಶಿನ ನೀನಾದೆ
ನಾದವೇದವ ಮೀರಿ ಬೆಳಗಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಮ್ಮ ನಾ ನೆನೆ ನೆನೆದು ನನ್ನನೆ ನಾ ಮರೆತಿರುವೆ
ನಿಮ್ಮ ನುಡಿ ಕೇಳಿ ಪರವಶನಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವ ತವತನುವಿನೊಳು ಬಸವತವ ಮನದೊಳಗು
ಬಸವಣ್ಣ ಪ್ರಾಣಭಾವದೊಳು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇರುಳರಿಯೆ ಹಗಲರಿಯೆ ದಿನವರಿಯೆ ತಿಥಿಯರಿಯೆ
ಬಸವಮಣಿಹದೊಳು ಏನನರಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಲಿಂಗಸಂಪನ್ನದ ಸಂಗ ಸಂಪಿಗೆ ತರುವೆ
ಜಂಗಮ ಪುಂಗವರ ಜಾಲಾರ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಯಕೈಲಾಸವ ಪಾವನವ ಮಾಡಿರುವ
ಕಾಯಕವೆ ಕೈಲಾಸವೆನುತಿರುವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನಿಜವರಿದ ನಿರ್ಮಳದ ಘನಗಂಧವಾಗಿರುವ
ಬೆಳಗುವ ಜ್ಯೋತಿಯ ತಿರುಳಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ನರನು ಹರನಾದ ಬಗೆ

– ಪ್ರೊ. ಕೆ.ಎಂ. ಮರಿಸ್ವಾಮಿ

*ಆಕಾರಸದೃಶಃ ಪ್ರಜ್ಞಃ ಪ್ರಜ್ಞಯಾ ಸದೃಶಾಗಮಃ ।*
*ಆಗಮೈಃ ಸದೃಶಾರಂಭ ಆರಂಭಸದೃಶೋದಯಃ ॥*

('ರಘುವಂಶ' – ಕಾಳಿದಾಸ)

ಮಹಾಕವಿಯ ಈ ಮಾತು ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರಸ್ವಾಮಿಗಳವರಿಗೆ ಅನ್ವರ್ಥವಾಗಿದೆ. ಅವಿರತವಾದ ಅಧ್ಯಯನ, ಅಧ್ಯಾಪನ ಮತ್ತು ಸತ್ಯಶುದ್ಧ ಕಾಯಕದಿಂದ ನಿತ್ಯನಿರ್ಮಲರಾಗಿ, ನರನು ಗುರುವಾಗಿ, ಗುರುವು ಹರನಾಗಿದ್ದಾರೆ ಶ್ರೀಗಳವರು. ಅವರ ಬಗ್ಗೆ ಸಂಕ್ಷಿಪ್ತವಾಗಿ ಇಷ್ಟು ಹೇಳಿದರೆ ಸಾಕೆನಿಸುತ್ತದೆ.

ಆಧ್ಯಾತ್ಮಿಕ ಬುನಾದಿ ಭರತಖಂಡದ ಜೀವಾಳ, ಅನಾದಿ ಕಾಲದ್ದು. ಮನುಕುಲಕ್ಕೆ ಇದೊಂದು ಅಮೂಲ್ಯವಾದ ಕೊಡುಗೆ. ಋಷಿಗಳೂ, ಆಚಾರ್ಯರೂ, ಬಸವಾದಿ ಶರಣರೂ, ದಾಸಶ್ರೇಷ್ಠರೂ ಈ ಸಂಪತ್ತನ್ನು ಬೆಳೆಸಿಕೊಂಡು ಬಂದರು. ಚರಿತ್ರೆಯನ್ನು ಅವಲೋಕಿಸಿದಾಗ ಕೆಲವು ವೇಳೆ ಇದು ಶಿಥಿಲವಾದದ್ದು ಕಂಡುಬರುತ್ತದೆ. ಅಂಥ ಒಂದು ಪರ್ವಕಾಲ ಈಗ ಪ್ರಾಪ್ತವಾಗಿದೆ. ಸದ್ಗುಣಗಳನ್ನು ದೌರ್ಬಲ್ಯವೆಂದೂ, ಧೂರ್ತನಾದವನು ಧೈರ್ಯಶಾಲಿಯೆಂದೂ ಹೇಳುವ ಕಾಲ ಬಂದಿದೆ. ಅನೈತಿಕವಾಗಿ ಅರ್ಥಸಂಚಯನ ಮಾಡಿದವರು ಅದೇ ಸರಿಯೆಂದು ತಮ್ಮ ವಾಚಾಳಿತನದಿಂದ ಸಾಧಿಸುತ್ತಿದ್ದಾರೆ. To err is human to accept it is divine ಎಂಬುದು ಕೇವಲ ಕೈಲಾಗದವರ ಮಂತ್ರ ಎಂದು ನಗೆಪಾಟಲು ಮಾಡುವ ಕಾಲ. ಹೀಗೆ ರಾಕ್ಷಸಪ್ರವೃತ್ತಿ ಹೆಚ್ಚುತ್ತಿರುವ ಕಾಲದಲ್ಲಿ ಸತ್ಯವೆಂಬುದು ಇದೆ. ಇದು ನಮ್ಮ ರಾಷ್ಟ್ರದ ಮಹಾಮಂತ್ರ, ಇದನ್ನೇಕೆ ನಮ್ಮ ಜನತೆ ಆಚರಿಸುತ್ತಿಲ್ಲ? ಎಂಬುದಾಗಿ ಮೇಲೆತ್ತಿದ ತೋಳಿನ ವ್ಯಾಸಮಹರ್ಷಿಯಂತೆ, ಜಗತ್ತನ್ನು ಎಚ್ಚರಿಸಿದ ಸ್ವಾಮಿ ವಿವೇಕಾನಂದರಂತೆ ೯೬ರ ತಪಸ್ವಿ ಪೂಜ್ಯ ಶ್ರೀಗಳವರು ದೇಶಕ್ಕೆ ಎಚ್ಚರಿಸುತ್ತಿದ್ದಾರೆ.

೧೯೪೦ರಿಂದ ೧೯೪೬ರವರೆಗೆ ನಾನು ಶ್ರೀಕ್ಷೇತ್ರದಲ್ಲಿ ವಿದ್ಯಾರ್ಥಿಯಾಗಿದ್ದೆ. ಶ್ರೀ ಉದ್ಧಾನಶಿವಯೋಗಿಗಳನ್ನು ಪ್ರತ್ಯಕ್ಷವಾಗಿ ನೋಡುವ ಭಾಗ್ಯ ನನಗೆ ಲಭಿಸಿತ್ತು. ಅವರು ಶ್ರೀ ಶ್ರೀ ಶಿವಕುಮಾರಸ್ವಾಮಿಗಳ ಬಗ್ಗೆ ಹೀಗೆ ಹೇಳುತ್ತಿದ್ದರಂತೆ "ನಮ್ಮ ಚಿಕ್ಕಸ್ವಾಮಿಗಳು ೧೦೦ ಉಳಿಪೆಟ್ಟು ತಿಂದಿದ್ದಾರೆ. ಇನ್ನು ೧ ಪೆಟ್ಟು

ಬಿದ್ದರೆ ಸಾಕು ಲಿಂಗವಾಗುತ್ತಾರೆ. ''ಈ ಮಾತನ್ನು ಆ ಕಾಲದಲ್ಲಿ ಶ್ರೀಕ್ಷೇತ್ರಕ್ಕೆ ಬರುತ್ತಿದ್ದ ಕೆಲವು ಭಕ್ತರು ಹೇಳುತ್ತಿದ್ದುದು ನನಗೆ ಜ್ಞಾಪಕವಿದೆ. ತಪೋಧನರೂ, ತ್ರಿಕಾಲಜ್ಞಾನಿಗಳೂ ಆಗಿದ್ದ ಶ್ರೀ ಉದ್ದಾನ ಶಿವಯೋಗಿಗಳ ಭವಿಷ್ಯವಾಣಿಯನ್ನು ಸತ್ಯವಾಗಿ ಮಾಡಿದ ಶ್ರೀಗಳವರನ್ನು ಇಂದು ನಾವು ನೋಡುತ್ತಿದ್ದೇವೆ.

**ಹು**ಟ್ಟಿದ ಮನುಜರೆಲ್ಲಾ ನೆಟ್ಟನೆ ಶಿವಜ್ಞಾನಿಗಳಾಗಲು ಸಾಧ್ಯವಾಗಲಾರದು. ಕಠೋಪನಿಷತ್ ಹೇಳುವಂತೆ ಶಿವಜ್ಞಾನ ಮಾರ್ಗ ಕ್ಷುರಸ್ಯಧಾರಾ ನಿಶಿತಾ, ಕತ್ತಿಯ ಅಲಗಿನಂತೆ ಹರಿತವಾದದ್ದು ಹಾಗೂ ದುರ್ಗಮವಾದ ಮಾರ್ಗ. ಲಕ್ಷಕ್ಕೆ ಒಬ್ಬ ಸಾಧಕನಾದರೆ, ಕೋಟಿಗೊಬ್ಬ ಸಿದ್ಧಿಯನ್ನು ಪಡೆದಾನು. ''ಬಹೂನಾಂ ಜನ್ಮ ನಾಮಂತೆ ಜ್ಞಾನವಾನ್ ಮಾರಿ ರಪದ್ಯತೆ'' ಎಂಬುದಾಗಿ ಗೀತೆ ಹೇಳುತ್ತದೆ. ಶ್ರೀಗಳವರು ಸ್ವೀಕರಿಸಿದ ಮಾರ್ಗ ಮೇಲೆ ಹೇಳಿದ ಹಾಗೆ ಕಠಿಣವಾದದ್ದು. ಬಿ.ಎ. ಪದವಿಯಲ್ಲಿ ವ್ಯಾಸಂಗ ಮಾಡಿ ಆಗಿನ ಕಾಲದ ಬ್ರಿಟಿಷ್ ಸರ್ಕಾರದಲ್ಲಿ ಒಬ್ಬ ದಕ್ಷ ಆಡಳಿತಾಧಿಕಾರಿಯಾಗಿ ಐಷಾರಾಮ ಜೀವನ ನಡೆಸಬಹುದಾಗಿದ್ದ ವ್ಯಕ್ತಿ ದುಷ್ಕರವಾದ ಸನ್ಯಾಸಮಾರ್ಗವನ್ನು ಸ್ವೀಕಾರಮಾಡಿ, ದೀಪ ತನ್ನನ್ನು ಸುಟ್ಟುಕೊಂಡು ಇತರರಿಗೆ ಬೆಳಕು ಕೊಡುವಂತೆ, ಚಂದನವು ತನ್ನನ್ನು ಅರೆದುಕೊಂಡು ಬೇರೆಯವರಿಗೆ ಸುವಾಸನೆ ಕೊಡುವಂತೆ, ಸಕಲ ಜೀವಾತ್ಮರಿಗೆ ಲೇಸನ್ನೇ ಬಯಸುತ್ತಾ, ಅಣ್ಣ ಬಸವಣ್ಣನ ೨೦ನೇ ಶತಮಾನದ ಕಾರುಣ್ಯದ ಕಂದನಾಗಿ ೬೭ ವರ್ಷಗಳ ಕಾಲ ಅವನು ತೋರಿಸಿದ ಕಾಯಕಮಾರ್ಗವನ್ನು ಪಾಲಿಸುತ್ತಾ ಶ್ರೀಕ್ಷೇತ್ರವನ್ನು ಕೈಲಾಸವನ್ನಾಗಿ ಮಾಡಿದ್ದಾರೆ ಪರಮಪೂಜ್ಯ ಶ್ರೀ ಶ್ರೀಗಳವರು.

''ಸನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ'' (ಗೀತೆ ೫-೬) ಯೋಗಿಯಾಗದವನು ಸನ್ಯಾಸಿಯಾಗಲಾರ. ಅಭ್ಯಾಸಯೋಗ, ಜ್ಞಾನಯೋಗ, ಧ್ಯಾನಯೋಗ, ಫಲತ್ಯಾಗ, ಆನಂತರ ಶಾಂತಿ. ಇವುಗಳಲ್ಲಿ ಪ್ರತಿಯೊಂದನ್ನೂ ಶ್ರೀಗಳವರಲ್ಲಿ ಕಾಣಬಹುದು. ಸತತವಾದ ಅಧ್ಯಯನದಿಂದ ಕನ್ನಡ, ಸಂಸ್ಕೃತ ಮತ್ತು ಆಂಗ್ಲಭಾಷೆಗಳಲ್ಲಿ ಆತ್ಮೋನ್ನತಿಗೆ ಅವಶ್ಯಕವಾದುದು ಏನಿದೆಯೋ ಅದೆಲ್ಲವನ್ನೂ ಕರಗತಮಾಡಿಕೊಂಡು ಜೀವನದಲ್ಲಿ ಅಳವಡಿಸಿ ಕೊಂಡಿದ್ದಾರೆ. ಅಧ್ಯಯನ ಮತ್ತು ಅಧ್ಯಾಪನ ಇವರಿಗೆ ಉಸಿರಾಟ ವಿದ್ದಂತೆ. ಅಧ್ಯಯನದಿಂದ, ಆಲೋಚನೆಯಿಂದ ವಿಚಾರಗಳನ್ನು ಸಂಗ್ರಹಿಸಿ ಅವುಗಳನ್ನು ತಮ್ಮ ನಿತ್ಯಜೀವನದಲ್ಲಿ ಒರೆಹಚ್ಚಿ ನೋಡಿ ಅನಂತರ ಜನರಿಗೆ ಪ್ರಚಾರ ಮಾಡುತ್ತಾ ಸಂಚಾರ ಮಾಡುವುದು ಇಂದಿಗೂ ಶ್ರೀಗಳವರ ಜೀವನ ವಿಧಾನ. ಹೀಗೆ ವಿಚಾರ, ಆಚಾರ, ಪ್ರಚಾರ, ಮತ್ತು ಸಂಚಾರ ಎಂಬ ಈ ನಾಲ್ಕು ಅಂಶಗಳು ಶ್ರೀಗಳವರ ಜೀವನದ ಅವಿಭಾಜ್ಯ ಅಂಗಗಳು. ಇದಕ್ಕೆ ಇವರು ೧೨ನೇ ಶತಮಾನದ ಶಿವಶರಣರ, ಮುಖ್ಯವಾಗಿ ತತ್ತ್ವಜ್ಞಾನಿ ಹಾಗೂ ಸಮಾಜಸುಧಾರಕರಾದ ಬಸವಣ್ಣನವರ ಬೋಧನೆಗಳನ್ನು ಆಧಾರ ಮತ್ತು ಆದರ್ಶವನ್ನಾಗಿ ತೆಗೆದುಕೊಂಡರು. ಇದೇ ಇಂದಿಗೂ ಇವರ ಜ್ಞಾನಯೋಗವಾಗಿದೆ. ಇವರ ಧ್ಯಾನದ ಬಗ್ಗೆ ಹೇಳಲು ಈ ಲೇಖಕ ಅಸಮರ್ಥ. ತ್ರಿಕಾಲಲಿಂಗಪೂಜಾನಿಷ್ಠರು. ಇವರ ಲಿಂಗಪೂಜಾ ವೇಳೆಯಲ್ಲಿ ನಿಜಗುಣರ ತತ್ತ್ವಪದಗಳನ್ನು ಶರಣರ ವಚನಗಳನ್ನು ಗಾಯನ ಮಾಡುವ ಪುಣ್ಯ ನನ್ನದಾಗಿತ್ತು. ಎರಡನೇ ಮಹಾಯುದ್ಧದ ಕಾಲದಲ್ಲಿ ದೇಶಕ್ಕೆ ಆಹಾರದ ಕೊರತೆಯಿದ್ದ ಕಾಲದಲ್ಲೂ ಹಳ್ಳಿಹಳ್ಳಿಗೆ ಹೋಗಿ ದವಸ ಸಂಗ್ರಹಿಸಿ ಜಾತಿ ಮತ ಭೇದವಿಲ್ಲದೆ ವಿದ್ಯಾರ್ಜನೆ ಗಾಗಿ ಸೇರಿದ್ದ ೧೨೦ ವಿದ್ಯಾರ್ಥಿಗಳಿಗೆ ಹಾಗೂ ದಿನನಿತ್ಯ ಬರುತ್ತಿದ್ದ ಭಕ್ತಾದಿಗಳಿಗೆ ಜ್ಞಾನದಾಸೋಹ ಮತ್ತು ಅನ್ನದಾಸೋಹ ನಡೆಸು ತ್ತಿದ್ದರು. ಈಗ ಅದರ ಸಾವಿರ ಸಾವಿರಪಟ್ಟು ವಿದ್ಯಾರ್ಥಿಗಳು ಮತ್ತು ಭಕ್ತರಿಗೆ ದಾಸೋಹ ಮಾಡುತ್ತಿರುವುದು ಅವರ ಫಲತ್ಯಾಗವನ್ನು ತೋರಿಸುತ್ತದೆ. ಈ ರೀತಿಯ ಸ್ವಾರ್ಥರಹಿತ ಕರ್ಮದಲ್ಲಿ ಶಾಂತಿ ಸಮಾಧಾನಗಳಿವೆ ಎಂಬುದನ್ನು ಜನಸಾಮಾನ್ಯರಿಗೆ ತಮ್ಮ ಆಚಾರದ ಮೂಲಕ ಶ್ರೀಗಳವರು ತಿಳಿಸುತ್ತಿದ್ದಾರೆ.

ಇವರು ಒಬ್ಬ ಶ್ರೇಷ್ಠ ಅಧ್ಯಾಪಕರು. ವಿದ್ಯಾರ್ಥಿಗಳಿಗೆ ಬೋಧನೆ ಮಾಡುವುದು ಇವರಿಗೆ ತುಂಬಾ ಪ್ರಿಯವಾದುದು. ನಾನು ಸಂಸ್ಕೃತ ಪ್ರಾಥಮಿಕ ತರಗತಿಯಲ್ಲಿ ವ್ಯಾಸಂಗ ಮಾಡುತ್ತಿದ್ದಾಗ ರಘುವಂಶ ಮಹಾಕಾವ್ಯದಲ್ಲಿ ದಿಲೀಪ ಮತ್ತು ಸುದಕ್ಷಿಣಾ ದೇವಿಯರು ವಸಿಷ್ಠರ ಆಶ್ರಮಕ್ಕೆ ಪ್ರಯಾಣ ಮಾಡುವ ಭಾಗ ''ತಾ ದಂಪತೀ ವಸಿಷ್ಠಸ್ಯ ಗುರೋರ್ಜಗ್ಮ ತುರಾಶ್ರಮಂ'' ಎಂಬುದನ್ನು ಹಳೇ ಪಾಠಶಾಲೆಯ ಮುಂದೆ ಪಾಠಮಾಡಿದುದು ಜ್ಞಾಪಕವಿದೆ. ಸುಶ್ರಾವ್ಯವಾದ ಕಂಠದಿಂದ ಶ್ಲೋಕವನ್ನು ಗಾಯನ ಮಾಡಿ, ಪದವಿಭಾಗ, ವ್ಯಾಕರಣಾಂಶಗಳ ವಿವರಣೆ ಮತ್ತು ಪ್ರತಿ ಪದಾರ್ಥಗಳನ್ನು ಅವರು ಹೇಳುವಷ್ಟರಲ್ಲಿ ಶ್ಲೋಕಗಳು ನಮಗೆ ಕಂಠಪಾಠವಾಗಿಬಿಡುತ್ತಿದ್ದವು. ಇಷ್ಟೆ ಅಲ್ಲ ಕೆಲವು ವೇಳೆ ಬೇರೆ ತರಗತಿಗಳಿಗೆ ಅನಿರೀಕ್ಷಿತವಾಗಿ ಪ್ರವೇಶಿಸಿ ವಿದ್ಯಾರ್ಥಿಗಳನ್ನು ಪರೀಕ್ಷಿಸುತ್ತಿದ್ದರು. ಹಾಗೆ ಮಾಡಿದಾಗ ವ್ಯಾಕರಣದ ತರಗತಿಯಲ್ಲಿ ತಪ್ಪು ಮಾಡಿ ಬೆತ್ತದಪ್ರಹಾರ ತಿಂದು ಅನಂತರ ಆಫೀಸಿನಲ್ಲಿ ಕಲ್ಲುಸಕ್ಕರೆ ಪಡೆದುಕೊಂಡದ್ದು ಈ ಲೇಖಕನ ಭಾಗ್ಯ. ವಿದ್ಯಾರ್ಥಿಗಳು ತಪ್ಪು ಮಾಡಿದಾಗ ಶ್ರೀಗಳವರ ಮನಸ್ಸು ವಜ್ರದಷ್ಟು ಕಠೋರ ವಾದರೂ ತಕ್ಷಣ ಹೂವಿಗಿಂತ ಕೋಮಲವಾಗಿಬಿಡುತ್ತಿತ್ತು. ಇದಲ್ಲವೆ ಮಹಾತ್ಮರ ಲಕ್ಷಣ? ಇನ್ನೂ ಕೆಲವು ಪ್ರಸಂಗಗಳನ್ನು ನೆನೆಸಿಕೊಂಡಾಗ ಶ್ರೀಗಳವರು ವಿದ್ಯಾರ್ಥಿಗಳಲ್ಲಿ ಅವರ ತಂದೆತಾಯಿಯರಿಗಿಂತಲೂ ಮಿಗಿಲಾದ ಪ್ರೀತಿವಾತ್ಸಲ್ಯಗಳನ್ನು ತೋರುತ್ತಿದ್ದುದು ನನ್ನ ಕಣ್ಣುಗಳನ್ನು ಒದ್ದೆ ಮಾಡುತ್ತವೆ.





''*ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ*'' (ಕಾಳಿದಾಸ) ವಿಭಿನ್ನ ರೀತಿಯ ಅಭಿರುಚಿಯುಳ್ಳ ಸಾಮಾನ್ಯ ಜನರನ್ನು ಮೇಲೆತ್ತಲು ನಾಟಕದಿಂದ ಮಾತ್ರ ಸಾಧ್ಯ ಎಂಬುದು ಶ್ರೀಗಳವರಿಗೆ ೧೯೪೦ರ ದಶಕದಲ್ಲಿ ಮನವರಿಕೆ ಯಾದಂತೆ ಕಾಣುತ್ತದೆ. ತತ್ವಬೋಧನೆ ಬಹಳ ಗಹನವಾದ ವಿಷಯ. ದೇಶದಲ್ಲಿ ಅರ್ಧದಷ್ಟು ಜನರಿಗೆ ಅಕ್ಷರಜ್ಞಾನವೇ ಇಲ್ಲದಿರುವಾಗ ''ಆರು ನಾನ್ಯಾರೆಂದು ವಿಚಾರಿಸು'' ಇತ್ಯಾದಿ ತತ್ವೋಪದೇಶಗಳು ಹೇಗೆ ಮುಟ್ಟೀತು? ಇದಕ್ಕೋಸ್ಕರ ದೃಶ್ಯಮಾಧ್ಯಮದ ಮೂಲಕ ಭಕ್ತಿಭಾವವನ್ನು ಉಂಟುಮಾಡಲು ೧೯೪೪ರಲ್ಲಿ **''ಭಕ್ತಮಾರ್ಕಂಡೇಯ''** ಎಂಬ ನಾಟಕವನ್ನು ವಿದ್ಯಾರ್ಥಿಗಳು ಅಭಿನಯಿಸುವಂತೆ ಶ್ರೀಗಳವರು ಅಪ್ಪಣೆ ಮಾಡಿದರು. ನಾಟಕದ ತರಬೇತಿ ನಡೆಯು ವಾಗಲಂತೂ ತಾವೇ ಮುಂದೆ ಕುಳಿತು ಪರಿವೀಕ್ಷಣೆ ಮಾಡುತ್ತಿದ್ದರು. ೧೯೪೪ರಿಂದ ೪೬ರವರೆಗೆ ಎರಡು ವರ್ಷಗಳಲ್ಲಿ ಆ ನಾಟಕ ಬೆಂಗಳೂರಿನ ಪುಟ್ಟಣ್ಣಚೆಟ್ಟಿ ಪುರಭವನದಲ್ಲಿ ಹಾಗೂ ತುಮಕೂರಿನ ವಿನೋದಾ ಟಾಕೀಸಿನಲ್ಲಿ ಶ್ರೀಕ್ಷೇತ್ರದ ಸಹಾಯಾರ್ಥವಾಗಿ ಪ್ರದರ್ಶನಗಳನ್ನು ನಡೆಸಿ ಅಪಾರ ಜನಮೆಚ್ಚುಗೆ ಪಡೆಯಿತು. ಅದರ ನೆನಪಾಗಿ ''ಮಾರ್ಕಂಡೇಯ ನಿಲಯ'' ಎಂಬ ವಿದ್ಯಾರ್ಥಿ ವಸತಿ ನಿಲಯ ಶ್ರೀಕ್ಷೇತ್ರದಲ್ಲಿದೆ. ಆಗ್ಗೆ ಸರಿಯಾಗಿ ೧೬ ವಯಸ್ಸಿನ ಈ ಲೇಖಕನೇ ಮಾರ್ಕಂಡೇಯನ ಪಾತ್ರ ವಹಿಸುತ್ತಿದ್ದ ಎಂದು ನಮ್ರತೆಯಿಂದ ಹೇಳಬಯಸುತ್ತಾನೆ. ಅಂದಿನಿಂದ ಪ್ರಾರಂಭವಾದ ದೃಶ್ಯ ಮಾಧ್ಯಮವನ್ನು ಶ್ರೀಗಳವರು ಇಂದಿನವರೆಗೂ ಜನಸಾಮಾನ್ಯ ರಿಗೆ ತತ್ವಬೋಧೆ ಮಾಡಲು ಉಪಯೋಗಿಸುತ್ತಿದ್ದಾರೆ. ಶ್ರೀಕ್ಷೇತ್ರದ ಅಧ್ಯಾಪಕರು ಮತ್ತು ವಿದ್ಯಾರ್ಥಿಗಳು **''ಜಗಜ್ಯೋತಿ ಬಸವೇಶ್ವರ''** ಎಂಬ ನಾಟಕದ ೬೫೦ಕ್ಕೂ ಹೆಚ್ಚು ಪ್ರದರ್ಶನಗಳನ್ನು ಗ್ರಾಮಾಂತರ ಗಳಲ್ಲಿ ಅಭಿನಯಿಸಿ ಶರಣರ ತತ್ವಪ್ರಚಾರ ಮಾಡುತ್ತಿದ್ದಾರೆ. **''ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯ ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯ''** ಎಂಬುದಾಗಿ ಅಣ್ಣನವರು ಏನು ಹೇಳಿದರೋ ಅದರಂತೆ ಶ್ರೀಗಳವರು ಇಲ್ಲಿ ಸಲ್ಲುವವ ರಾಗಿದ್ದಾರೆ ಎಂಬುದರಲ್ಲಿ ಎರಡನೇ ಮಾತಿಲ್ಲ. ಹರಗುರು ಚರಮೂರ್ತಿ, ಪ್ರಣವಸ್ವರೂಪಿ ಎಂಬ ಶಬ್ದಗಳು ಈ ಮಹಾಮಹಿಮರಲ್ಲಿ ಅರ್ಥವನ್ನು ಕಂಡುಕೊಂಡಿವೆ. **''ಅಭಿತೋ ಬಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್''** (ಗೀತೆ ೫-೨೬) ಆತ್ಮಜ್ಞಾನಿಗಳಿಗೆ ಬ್ರಹ್ಮಸಾಕ್ಷಾತ್ಕಾರ ಅವರು ಜೀವಿಸಿರುವಾಗಲೇ ಉಂಟಾಗುತ್ತದೆ ಎಂಬುದಕ್ಕೆ ಶ್ರೀಗಳವರು ಒಂದು ಪ್ರತ್ಯಕ್ಷ ನಿದರ್ಶನ. ನರನು ಹರನಾದುದನ್ನು ನಾವುಗಳು ಕಣ್ಣಾರೆ ನೋಡುತ್ತಿರುವುದು ನಮ್ಮೆಲ್ಲರ ಭಾಗ್ಯ.

*(ಸೌಜನ್ಯ : ತೊಂಬತ್ತರ ತಪಸ್ವಿ)* ❀

## ಜೀವನ ಕಲೆ

**ಜೀ**ವನವೆನ್ನುವುದು ಒಂದು ಕಲೆ; ಸಂಗೀತ, ಸಾಹಿತ್ಯಾದಿ ಕಲೆಗಳಿದ್ದಂತೆ. ಕಲೆಯ ಸಿದ್ಧಿಗೆ ಸಾಧನೆ ಮುಖ್ಯ. ಸಂಗೀತವನ್ನು ಸಶಾಸ್ತ್ರೀಯವಾಗಿ ಹಲವಾರು ವರ್ಷಗಳ ಕಾಲ ಆ ಕಲೆಯನ್ನು ರೂಢಿಸಿಕೊಂಡ ಸಂಗೀತಗಾರ ಮಧುರವಾಗಿ ಹಾಡಿದರೆ ಶ್ರೋತೃಗಳಿಗೆ ಕರ್ಣಾನಂದ ವಾಗುತ್ತದೆ. ಆದರೆ ಅಭ್ಯಾಸವಿಲ್ಲದೆ ಕಲೆಯ ಗಂಧವಿಲ್ಲ ದವನು ಹಾಡಿದರೆ ಅದು ಗಾರ್ದಭ ಸಂಗೀತವಾಗುತ್ತದೆ. ಅದರಂತೆ ಸಾಹಿತ್ಯಾಭ್ಯಾಸವಿಲ್ಲದವನು ಸಾಹಿತ್ಯ ರಚನೆ ಮಾಡಿದರೆ ಅಪಹಾಸ್ಯಕ್ಕೆ ಗುರಿಯಾಗಬೇಕಾಗುತ್ತದೆ. ಅದರಂತೆ ಜೀವನ ಕಲೆಯನ್ನು ಅರಿಯದವನು ಸಮಾಜದಲ್ಲಿ ಹಗುರನಾಗಬೇಕಾಗುವುದು. ಆದರೆ ಈ ಜೀವನ ಕಲೆ ಒಂದು ದಿವಸದಲ್ಲಿ, ಒಂದು ತಿಂಗಳಲ್ಲಿ, ಒಂದು ವರ್ಷದಲ್ಲಿ ಬರುವಂಥದಲ್ಲ. ಆ ಕಲೆಯನ್ನು ರೂಢಿಸಿಕೊಳ್ಳಬೇಕಾದರೆ ಬದುಕಿನುದ್ದಕ್ಕೂ ನಿರಂತರ ಸಾಧನೆ ನಡೆಯಬೇಕು. ಯಾವ ಮನುಷ್ಯನಲ್ಲಿಯೂ ನೂರಕ್ಕೆ ನೂರರಷ್ಟು ಒಳ್ಳೆಯ ಗುಣಗಳಿರುವುದಿಲ್ಲ ಅಥವಾ ನೂರಕ್ಕೆ ನೂರರಷ್ಟು ದುಷ್ಟಗುಣಗಳೂ ಇರುವುದಿಲ್ಲ. ಇದು ತತ್ತ್ವಜ್ಞಾನಿಗಳ ಮಾತು. ಒಳ್ಳೆಯದೂ ಇದೆ, ಕೆಟ್ಟದ್ದೂ ಇದೆ. ಕೆಟ್ಟಗುಣಗಳ ಸಂಖ್ಯೆಯನ್ನು ಕಡಿಮೆ ಮಾಡಿಕೊಂಡು ಒಳ್ಳೆಯ ಗುಣಗಳ ಸಂಖ್ಯೆಯನ್ನು ಬೆಳೆಸಿ ಕೊಂಡಾಗ ಆದರ್ಶ ಪುರುಷನಾಗುತ್ತಾನೆ. ಈ ಸಂಖ್ಯೆ ಹೆಚ್ಚಾದಾಗ ಲೋಕಪೂಜ್ಯನಾಗುತ್ತಾನೆ. ಈ ಒಂದು ಸಾಧನೆ ನಿರಂತರವಾಗಿ ನಡೆಯಬೇಕು. ನಡೆಯುವಾಗ, ನುಡಿಯುವಾಗ, ವ್ಯವಹರಿಸುವಾಗ ತಿದ್ದಿಕೊಳ್ಳಬೇಕು. ಇದು ಚಿಕ್ಕಂದಿನಿಂದಲೂ ನಡೆಯಬೇಕು. ಹೀಗೆ ಕ್ರಮವರಿತ ಸಾಧನೆ ಒಂದು ಶಕ್ತಿಯಾಗಿ ಬೆಳೆಯುತ್ತದೆ. ಇದನ್ನು ಇಚ್ಛಾಶಕ್ತಿ ಎಂದು ಕರೆಯುತ್ತಾರೆ. ಇಂಥ ಇಚ್ಛಾಶಕ್ತಿ ಯನ್ನು ಬೆಳೆಸಿಕೊಂಡಾಗ ಮಾತ್ರ ವ್ಯಕ್ತಿ ಲೋಕವಂದ್ಯ ನಾಗುತ್ತಾನೆ.

– ಶ್ರೀವಾಣಿ



## ವಚನಗಳ ವಿಶ್ಲೇಷಣೆ

– ಸಂ. ಡಾ. ಎಲ್. ಬಸವರಾಜು
ವಿಶ್ರಾಂತ ಪ್ರಾಧ್ಯಾಪಕರು,
ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು.

*ವ್ಯಾಧನೊಂದು ಮೊಲನ ತಂದರೆ*
*ಸಲುವ ಹಾಗಕ್ಕೆ ಬಿಲಿವರಯ್ಯ !*
*ನೆಲನಾಳ್ದನ ಹೆಣನೆಂದರೆ*
*ಒಂದಡಕೆಗೆ ಕೊಂಬವರಿಲ್ಲ ನೋಡಯ್ಯ !*
*ಮೊಲನಿಂದ ಕರಕಷ್ಟ ನರನ ಬಾಳುವೆ*
*ದಲೆ ನಂಬೋ ಕೂಡಲಸಂಗಮದೇವನ !*

ಭೋಗ-ಯೋಗಸಮನ್ವಯವಿಲ್ಲದೆ, ಕೇವಲ ಭೋಗದ ಕಡೆಗೇ ತನು-ಮನ-ಧನ ತೆತ್ತು ಅಪುರೂಪವಾದ ಮಾನವಜನ್ಮ ಅರ್ಥಶೂನ್ಯವಾಗುವುದು ಶ್ರೇಯಸ್ಕರವಲ್ಲ. ಧನವನ್ನೆಲ್ಲ ಸೂರೆಗೊಟ್ಟು, ಮನವನೆಲ್ಲ ಮಾರುಗೊಟ್ಟು, ಮೆರೆಸಿದ ಈ ಮೃಣ್ಮಯ ದೇಹಕ್ಕೆ – ಚಿನ್ಮಯನು ತೊಲಗಿದನೆಂದರೆ – ತೃಣಮಾತ್ರವೂ ಬೆಲೆಯಿಲ್ಲ. ಬೇಡನು ತೂಗಿ ತಂದ ಕಾಡುಮೃಗವಾದ ಮೊಲದ ಮೃತದೇಹಕ್ಕೆ ಹಾಗಕಾಸಿನ ಬೆಲೆಯಾದರೂ ಉಂಟು. ಭೂಮಂಡಲವನ್ನಾಳಿದ ಭೂಪತಿಯ ಹೆಣವೆಂದರೆ ಅದನ್ನು ಯಾರೊಬ್ಬರೂ ಒಂದು ಗೋಟಡಕೆಗೂ ಕೊಳ್ಳುವುದಿಲ್ಲ! ಸಾವಿನ ಜೊತೆಯಲ್ಲೇ ಮಾನವನ ಮಹಿಮೆಯೆಲ್ಲ ಹೀಗೆ ಮಾಯವಾಗುವುದಾದರೆ ಅವನು ನಡೆಸಿದ ಜೀವನವೆಲ್ಲ ವನ್ಯಮೃಗಜೀವನಕ್ಕಿಂತ ಕೀಳಾಯಿತು ! ಹಾಗಾಗುವುದು ಬೇಡ. ಬದುಕುವಾಗ ಭೋಗ-ಯೋಗಗಳನ್ನು ಹದ ಬೆದೆಯರಿತು ಬೆರೆಸಿ ಬದುಕು. ಅಂತಹ ಸಮರಸ ಅಮೃತಜೀವನಕ್ಕೆ ''ಮರಣ ಮಹಾನವಮಿ''ಯೆನಿಸುವುದು.

*ತನ್ನಾಶ್ರಯದ ರತಿಸುಖವನು*
*ತಾನುಂಬ ಊಟವನು*
*ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ?*
*ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವನು*
*ತಾ ಮಾಡಬೇಕಲ್ಲದೆ*
*ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ?!*
*ಸಾಕ್ಷಿ :*
*ಸ್ತ್ರೀ ಸಂಗಂ ಪರಹಸ್ತಂ ಚ ಪರವಕ್ತ್ರಂ ಚ ಭೋಜನಂ*
*ಪರಹಸ್ತಾ ಚ ಪೂಜಾ ಯಾ ತ್ರಿವಿಧಂ ನರಕಂ ವ್ರಜೇತ್*
ಎಂದುದಾಗಿ
ಇದನರಿಯದೆ ಬರಿಯುಪಚಾರಕ್ಕೆ ಮಾಡುವರೆಲ್ಲರು
ನಿಮ್ಮನೆತ್ತ ಬಲ್ಲರು, ಕೂಡಲಸಂಗಮದೇವ?!

ದೇವರ ಪೂಜೆಯೆನ್ನುವುದು ಕೇವಲ ದೇಹಚೇಷ್ಟೆಯಲ್ಲ. ಅದು ಮನೋಭಿಪ್ಸೆ ಮತ್ತು ವ್ಯಕ್ತಿನಿಷ್ಠ. ಇದನ್ನರಿಯದೆ ಕೆಲವರು ಶಿವಪೂಜೆ ನಡೆದರಾಯಿತೆಂದುಕೊಂಡು, ಅದನ್ನು ತಮ್ಮ ಪರವಾಗಿ ಇನ್ನೊಬ್ಬರ ಕೈಯಿಂದ ಮಾಡಿಸುವರು. ಇದನ್ನು ಕಂಡು ಬಸವಣ್ಣನವರು ಜಿಗುಪ್ಸೆಗೊಂಡು, ಎರಡು ನಿದರ್ಶನಗಳಿಂದ ಖಂಡಿಸಿರುವರು :

ಮೊದಲನೆಯದಾಗಿ ನಾವು ನಮ್ಮ ದೇಹಪೋಷಣೆಗಾಗಿ ಉಣ್ಣುವ ಊಟವನ್ನು, ನೀನು ನನಗಾಗಿ ಉಣ್ಣೆಂದು ಇತರರೊಡನೆ ವ್ಯವಹರಿಸುವುದಿಲ್ಲ. ಎರಡನೆಯದಾಗಿ ದೇಹ ಸುಖಕ್ಕಾಗಿ ಮಾಡುವ ಸ್ತ್ರೀಸಂಗವನ್ನು, ನನ್ನ ಪರವಾಗಿ ನೀನೆ ಮಾಡೆಂದು ಅನ್ಯರಿಂದ ಮಾಡಿಸುವುದಿಲ್ಲ. ಹೀಗೆ ದೇಹ ಸಂಬಂಧವಾದ ಪೋಷಣೆ-ತೋಷಣೆಗಳನ್ನು ನಾವೇ ನೇರವಾಗಿ ಕೈಕೊಂಡ ಹೊರತು ಸಂತೃಪ್ತಿ ಸಾಧ್ಯವಿಲ್ಲ. ಅಂದಮೇಲೆ ನಮ್ಮ ಆತ್ಮಸಂಬಂಧವಾದ ಅರ್ಚನೆ ಪೂಜೆಗಳನ್ನು ನಾವೇ ತ್ರಿಕರಣ ಪೂರ್ವಕವಾಗಿ ಮಾಡದೇ ಹೋದರೆ, ಅವು ಕೇವಲ ಉಪಚಾರಗಳಾಗಿ, ದೇವರಿಗೆಸಗಿದ ಅಪಚಾರಗಳಾಗುವುವು. ಅಂಥವರಿಗೆ ದೇವರು ದೂರ, ಆತ್ಮಸಾಕ್ಷಾತ್ಕಾರವೆನ್ನುವುದು ಇನ್ನೂ ದೂರ.

*ದೂಷಕನಾವನೊಬ್ಬ ದೇಶವ ಕೊಟ್ಟರೆ*
*ಆಶೆಮಾಡಿಯಾತನ ಹೊರೆಯಲಿರಬೇಡ ಕಂಡಯ್ಯ !*
*ಮಾದಾರ ಶಿವಭಕ್ತನಾದರೆ*
*ಆತನ ಹೊರುಯಲಿಪ್ಪುದು ಕರ ಲೇಸಯ್ಯ !*
*ತೊತ್ತಾಗಿಪ್ಪುದು ಕರ ಲೇಸಯ್ಯ*
*ಕಾಡಿ ಸೊಪ್ಪ ತಂದು ಓಡಿವಲ್ಲಿ ಹುರಿದಿಟ್ಟುಕೊಂಡು*
*ಕೂಡಿಕೊಂಡಿಪ್ಪುದು ನಮ್ಮ ಕೂಡಲಸಂಗನ ಶರಣರ !*

ಸಾಮ್ರಾಟನಾದ ಅಯೋಗ್ಯನೊಬ್ಬನು ಅಪಾರವಾದ ರಾಜ್ಯವನ್ನೇ ಧಾರೆಯೆರೆದು ಕೊಟ್ಟೇನೆಂದರೂ, ನೀನು ಆಶೆಮಾಡಿ, ಅವನ ಹಂಗಿನಲ್ಲಿರಬೇಡ. ಅದು ನಿನ್ನ ಆತ್ಮದ ಅಧಃಪಾತ! ಆತ್ಮೋನ್ನತಿಯ ಸಾಧನೆಗೆ ಸಹಾಯಕವಾಗುವ ಶಿವಭಕ್ತನೊಬ್ಬನು ಅಸ್ಪೃಶ್ಯನೇ ಆಗಿರಲಿ, ಅವನ ಆಶ್ರಯದಲ್ಲಿದ್ದು, ಅವನಿಗೆ ದಾಸನಾಗಿದ್ದು, ಅವನಿಂದ ಪ್ರಸಾದವಾಗಿ ಬಂದ (ಅಂಬಲಿ) ತುಂಬೆಯ ಸೊಪ್ಪನ್ನಾದರೂ (ಓಡಿನಲ್ಲಿ ಹುರಿದು) ಸೇವಿಸಿಕೊಂಡಿರುವುದು ಶ್ರೇಯಸ್ಕರ. ಸವಿಸವಿಯಾದ ಉಣಿಸು, ಸುಪ್ಪತ್ತಿಗೆಗಳ ಲಾಲಸೆಗೆ ಮನಸೋತು ನಿನ್ನ ಆತ್ಮವನ್ನು ನೀಚರಿಗೆ ಮಾರಿಕೊಂಡೀಯೆ ಜೋಪಾನ.

*(ಕೃಪೆ : ಬಸವ ವಚನಾಮೃತ)*





## ಸ್ವರ ವಚನಗಳು

– ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ
ವಿಶ್ರಾಂತ ಪ್ರಾಧ್ಯಾಪಕರು,
ಗುಲಬರ್ಗಾ ವಿಶ್ವವಿದ್ಯಾಲಯ,
ಗುಲ್ಬರ್ಗಾ

ಪ್ರತಿಯೊಂದು ವಸ್ತುವಿಗೆ ತನ್ನದೇ ಆದ ನಾದವಿದೆ. ಆ ನಾದವೇ ಸಂಗೀತಕ್ಕೆ ಮೂಲವಾಗಿರುವುದು. ನಾದದಲ್ಲಿ ಅಹತ ನಾದ ಮತ್ತು ಅನಾಹತನಾದ ಎಂದು ಎರಡು ಬಗೆಗಳಿರುವವು. ಅಸಹತನಾದವು ಮನುಷ್ಯಸೃಷ್ಟಿಯಾದರೆ ಅನಾಹತನಾದವು ಪ್ರಕೃತಿ ಸಹಜವಾದದ್ದಾಗಿದೆ. ಅದು ಹಕ್ಕಿಗಳ ಕಲರವ, ಗಿಡಮರಗಳ ಮರ್ಮರ, ನೀರಿನ ತರಂಗಗಳಿಂದ ಹೊರಡುವ ನಿನಾದವಾಗಿರುವುದು. ಮನುಷ್ಯನು ತನ್ನ ಸ್ವಪ್ರಯತ್ನದಿಂದ ಹೊರಡಿಸುವುದು ಅಹರನಾದವೆನಿಸಿದೆ. ಈ ನಾದದಿಂದಲೇ ಸಂಗೀತ ಕಲೆಯು ಹುಟ್ಟುವಂತಹುದು.

ಸಂಗೀತ ಕಲೆಯು ಲಲಿಕಲೆಗಳಲ್ಲಿಯೆ ಮಧುರವಾದದ್ದಾಗಿದೆ. ಇದು ಗಾಯನ, ವಾದನ, ನರ್ತನಗಳಿಂದ ಕೂಡಿರುವಂತಹದು. 'ಧಾತು ಮಾತು ಸಮಾಯುಕ್ತಂ ಗೀತಮಿತ್ಯುಚ್ಯತೇ ಬುಧೈಃ' 'ಧಾತು' ಎಂದರೆ 'ಸರಿಗಮಪದನಿಂ' ಸಪ್ತಸ್ವರಗಳು. ಮಾತು ಎಂದರೆ ಸಾಹಿತ್ಯ – ಇವೆರಡೂ ಕೂಡಿಕೊಂಡದ್ದು ಗೀತ-ಸಂಗೀತವಾಗಿರುವುದು. ಹೀಗೆ ಸಾಹಿತ್ಯಕ್ಕೆ ನಾದವು ಸೇರಿಕೊಂಡಾಗ ಅದುವೇ ಸಂಗೀತ ಎನ್ನುವ ವಾಡಿಕೆ. ಸ್ವರವಿಡಿದು ತನ್ನದೇ ಆದ ಧಾಟಿಯಲ್ಲಿ ಹಾಡುವ ಹಾಡು ಸ್ವರವಚನ ಎನಿಸಿದೆ.

ಸ್ವರವಚನಗಳು ಮೊದಲು ಹನ್ನೆರಡನೆಯ ಶತಮಾನದ ಶಿವಶರಣರಿಂದ ರಚನೆಗೊಂಡಥವುಗಳು. ಇವುಗಳಿಗೆ ಮೂಲ ಜನಪದ ಹಾಡುಗಳು, ಆದರೆ ಆ ಹಾಡುಗಳ ಕಾಲ ಗೊತ್ತಾಗದ್ದಕ್ಕೆ ದಾಖಲಾತಿಗೊಂಡಿರುವ ಶಿವಶರಣರಿಂದ ರಚಿತವಾಗಿರುವ ಸ್ವರವಚನಗಳೇ ಪ್ರಾಚೀನವಾದವುಗಳೆಂದು ಹೇಳಲಾಗುತ್ತಿದೆ. ಅದೇ ರೀತಿ ಶಿವಶರಣರು ರಚಿಸಿರುವ ವಚನಗಳಿಗೂ ಜನಪದ ಹಾಡುಗಳೇ ಮೂಲವಾಗಿರುತ್ತವೆಯೆಂದೂ ಗುರುತಿಸಿದ್ದಾರೆ. ಆದಿ ವಚನಕಾರನೆನಿಸಿದ ಜೇಡರ ದಾಸಿಮಯ್ಯನ ವಚನಗಳಿಗೆ ಅಂಶಗಣ ಮೂಲಕ ಜನಪದ ತ್ರಿಪದಿಗಳೇ ಪ್ರೇರಣೆ ಎಂದಿರುವುದನ್ನು ಗಮನಿಸಬಹುದಾಗಿದೆ.

ವಚನ ಎಂಬ ಪದವು ಪ್ರಾಚೀನ ಚಂಪೂಕಾವ್ಯಗಳಲ್ಲಿ ಮೊದಲು ಅಲ್ಲಲ್ಲಿ ಬಳಕೆಯಾಗಿರುವುದನ್ನು ಕಾಣುತ್ತೇವೆ. ಕಥೆಯನ್ನು ಸಂಕ್ಷಿಪ್ತವಾಗಿ ಹೇಳಬೇಕಾದಾಗ ಚಂಪೂಕವಿಗಳು ಮಧ್ಯೆ ಮಧ್ಯೆ 'ವಚನ' ಎಂಬ ಪದವನ್ನು ಬಳಸಿರುವರು. ಇಲ್ಲಿ ವಚನ ಎಂದರೆ ಪದ್ಯ ಎನ್ನುವ ಅರ್ಥವುಳ್ಳದ್ದಾಗಿದೆ. ಇದು ಗದ್ಯವಾದರೂ ಲಯಬದ್ಧವಾದ ಗದ್ಯವಾಗಿರುತ್ತದೆ. ಅನುಭಾವದ ವಿಷಯಗಳನ್ನೊಳಗೊಂಡ ಜನವಾಣಿಯಾಗಿರುತ್ತದೆ. ಈ ಜನವಾಣಿಯನ್ನೇ ದೇವವಾಣಿಯನ್ನಾಗಿಸಿದ ಕೀರ್ತಿ ಶಿವಶರಣದಾಗಿದೆ. ಇವು ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿಯಾದ ಸೂಳ್ನುಡಿಗಳು, ಅಮೃತನುಡಿಗಳು; ಶಿವಶರಣರ ಶಿವಾನುಭವಿಗಳ ಅಂತರಂಗದ ರತ್ನಗಳು; ಮುತ್ತಿನ ಹಾರಗಳು; ಕ್ರಿಯಾಜ್ಞಾನಗಳ ಸುಂದರ ಸಮನ್ವಯದ ಅಭಿವ್ಯಕ್ತಿಗಳು. ಕಾಯಕ ದಾಸೋಹ ಸಿದ್ಧಾಂತಗಳ, ಶರಣಸಂಸ್ಕೃತಿಯ ಪಡಿಯಚ್ಚುಗಳಿವು. ವಿಶ್ವಸಾಹಿತ್ಯಕ್ಕೆ ಕನ್ನಡ ಸಾಹಿತ್ಯದ ಮೂಲಕ ನೀಡಿರುವ ವಿಶಿಷ್ಟ ಕಾಣಿಕೆಗಳಾಗಿವೆ.

'ವಚನ' ಎಂದರೆ ಹುಸುಹೊದ್ದದ ನುಡಿಯಾಗಿರುವುದು. ಶಿವನ ಸಾಕ್ಷಾತ್ಕಾರಕ್ಕಾಗಿ ತಮ ತಮಗೆ ಹೊಳೆದಂತೆ ಹಾಡಿದ ಹಾಡುಗಳಿವಾಗಿವೆ. ಬಸವಣ್ಣನವರು **'ಆನು ಒಲಿದಂತೆ ಹಾಡುವೆ'** ಎಂದು ಹಾಡಿದ್ದನ್ನು ಉಲ್ಲೇಖಿಸಬಹುದಾಗಿದೆ.

*ತಾಳಮಾನ ಸರಿಸವನರಿಯೆ*
*ಓಜೆ ಬಜಾವಣೆಯ ಲೆಕ್ಕವನರಿಯೆ,*
*ಅಮೃತಗಣ ದೇವಗಣವನರಿಯೆ,*
*ಕೂಡಲಸಂಗಮದೇವಾ, ನಿನಗೆ*
*ಕೇಡಿಲ್ಲವಾಗಿ ಆನು ಒಲಿದಂತೆ ಹಾಡುವೆ !*

ಮತ್ತೊಂದು ವಚನದಲ್ಲಿ ದೇಹವನ್ನು ವೀಣೆಗೆ ಹೋಲಿಸಿ ರೂಪಕ ಅಲಂಕಾರದಲ್ಲಿ ಸಂಗೀತದಲ್ಲಿಯ 'ಬತ್ತೀಸ ರಾಗಗಳ' ಉಲ್ಲೇಖ ಮಾಡಿರುವುದನ್ನು ಕಾಣಬಹುದಾಗಿದೆ.

*ಎನ್ನ ಕಾಯವ ದಂಡಿಗೆಯ ಮಾಡಯ್ಯ,*
*ಎನ್ನ ಶಿರವ ಸೋರೆಯ ಮಾಡಯ್ಯ,*
*ಎನ್ನ ನರವ ತಂತಿಯ ಮಾಡಯ್ಯ,*
*ಎನ್ನ ಬೆರಳ ಕಡ್ಡಿಯ ಮಾಡಯ್ಯ,*
*ಬತ್ತೀಸ ರಾಗವ ಪಾಡಯ್ಯಾ,*
*ಉರದಲೊತ್ತಿ ಬಾರಿಸು, ಕೂಡಲಸಂಗಮದೇವಾ.*

ಬಸವಾದಿ ಶಿವಶರಣರು ವಚನಗಳನ್ನು 'ಗೀತ' ಎಂದೂ ಕರೆದಿರುವರು.

*ಎರಡೆಂಬತ್ತು ಕೋಟಿ ವಚನವ ಹಾಡಿ*
*ಹಲವ ಹಂಬಲಿಸಿತೆನ್ನ ಮನವು*
*ಮನ ಘನವನರಿಯದು,*
*ಘನ ಮನವನರಿಯದು.*
*ಗುಹೇಶ್ವರನೆಂಬ ಲಿಂಗವನರಿದ ಬಳಿಕ*
*ಗೀತವೆಲ್ಲ ಒಂದು ಮಾತಿನೊಳಗು !*

ಎಂದಿರುವ ಅಲ್ಲಮಪ್ರಭುದೇವರು ೨೮೦ ಕೋಟಿ ವಚನಗಳನ್ನು ಬರೆದಿದ್ದರೆಂದೂ ಹಾಡುತ್ತಿದ್ದರೆಂದೂ ತಿಳಿದುಬರುವುದು. ಅದೇ ರೀತಿ ಶಿವಯೋಗಿ ಸಿದ್ಧರಾಮರು 'ಅರುವತ್ತೆಂಟುಸಾವಿರ ವಚನಗಳನ್ನು ಹಾಡಿ-ಹಾಡಿ ಸೋತಿತೆನ್ನಮನ' ಎಂದುದನ್ನೂ ಅರಿಯಬಹುದು.



*ಅರವತ್ತೆಂಟು ಸಾವಿರ ವಚನಂಗಳ ಹಾಡಿ ಹಾಡಿ*
*ಸೋತಿತೆನ್ನ ಮನ ನೋಡಯ್ಯ.*
*ಹಾಡುವುದೊಂದೇ ವಚನ, ನೋಡುವುದೊಂದೇ ವಚನ*
*ವಿಷಯ ಬಿಟ್ಟು ನಿರ್ವಿಷಯನಾಗುವುದೊಂದೇ ವಚನ*
*ಕಪಿಲಸಿದ್ಧ ಮಲ್ಲೇಶನಲ್ಲಿ.*

ಎಷ್ಟು ಹಾಡಿದರೂ, ಆಡಿದರೂ, ನೋಡಿದರೂ ನಾಲಿಗೆ, ಕಾಲು, ಕಣ್ಣು ದಣಿಯವು ಎಂದೆನ್ನುತ್ತ ಕೈಯಾರೆ ಪೂಜಿಸಿ ಮನದಣಿಯದೆಂದೂ ಹಾಡಿದ್ದನ್ನು ಬಸವಣ್ಣನವರ ವಚನ ಸಾರಿ ಹೇಳುತ್ತಿದೆ.

*ಆಡಿ ಕಾಲು ದಣಿಯವು, ನೋಡಿ ಕಣ್ಣು ದಣಿಯವು,*
*ಹಾಡಿ ನಾಲಿಗೆ ದಣಿಯದು, ಇನ್ನೇವೆನಿನ್ನೇವೆ?*
*ನಾ ನಿಮ್ಮ ಕೈಯಾರೆ ಪೂಜಿಸಿ ಮನ ದಣಿಯಲೊಲ್ಲದಿನ್ನೇವೆನಿನ್ನೇವೆ?*
*ಕೂಡಲಸಂಮದೇವಾ ಕೇಳಯ್ಯಾ, ನಿಮ್ಮ ಉದರವ*
*ಬಗಿದಾನು ಹೋಗುವ ಭರವೆನಗೆ.*

ನಮ್ಮ ವಿದ್ವಾಂಸರು ಪೂರ್ವಾಗ್ರಹಪೀಡಿತರಾಗಿ ವಚನಗಳು ಸಾಹಿತ್ಯವೇ ಅಲ್ಲ ಎಂದು ಹೇಳುತ್ತಿದ್ದಂತೆ ಅವುಗಳನ್ನು ಹಾಡಲು ಬರುವುದಿಲ್ಲವೆಂದೂ ಹೇಳುವವರಿಗೆ ನಮ್ಮ ಗಾನಯೋಗಿಗಳಾಗಿರುವ ಪಂಚಾಕ್ಷರಿ ಗವಾಯಿಗಳು, ಡಾ. ಪಂ. ಪುಟ್ಟರಾಜ ಗವಾಯಿಗಳು, ಡಾ. ಮಲ್ಲಿಕಾರ್ಜುನ ಮನ್ಸೂರ, ಪಂ. ಬಸವರಾಜ ರಾಜಗುರು, ಪಂ. ಸಿದ್ಧರಾಮ ಜಂಬಲದಿನ್ನಿ, ಪಂ. ಸೋಮನಾಥ ಮರಡೂರ, ಡಾ. ನಂದಾ ಪಾಟೀಲ, ಪ್ರೊ. ಹನುಮಣ್ಣನಾಯಕ ದೊರೆ, ಶ್ರೀ ಈಶ್ವರ ಮಿಣಚಿ, ಶ್ರೀ ಬಾಳಪ್ಪ ಹುಕ್ಕೇರಿ ಮತ್ತು ತತ್ತ್ವಪದಗಳನ್ನು ಹಾಡುತ್ತಿರುವ ನಮ್ಮ ಭಜನಾ ಮೇಳದ ಸಾವಿರಾರು ಶ್ರೀಸಾಮಾನ್ಯರೂ ಸಾಕ್ಷಿಯಾಗಿರುವುದನ್ನು ಮರೆಯಲಿಕ್ಕಾಗದು.

ಹನ್ನೆರಡು ಶತಮಾನದ ಶಿವಶರಣರಿಂದ ರಚನೆಗೊಂಡಿರುವ ಸ್ವರವಚನಗಳು ನಿಜಗುಣಾದಿ ಶಿವಯೋಗಿಗಳಿಂದ ಮುಂದುವರಿದುದನ್ನು ಅರಿತುಕೊಳ್ಳಬಹುದಾಗಿದೆ. ಶಿವಶರಣರಲ್ಲಿ ಸಕಲೇಶ ಮಾದರಸ, ಜೇಡರ ದಾಸಿಮಯ್ಯ, ಬಸವಣ್ಣ, ಅಲ್ಲಮಪ್ರಭು, ಚೆನ್ನಬಸವಣ್ಣ, ಅಕ್ಕಮಹಾದೇವಿ, ಸಿದ್ಧರಾಮ, ಅಮುಗಿದೇವ, ನಿಜಗುಣ-೧, ನಿಜಲಿಂಗ ಚಿಕ್ಕಯ್ಯ, ನೀಲಲೋಚನೆ, ಬಹುರೂಪಿ ಚೌಡಯ್ಯ, ಆದಯ್ಯ, ಕರಸ್ಥಲದ ಶಂಕರದೇವ ಮೊದಲಾದ ಶಿವಶರಣ – ಶರಣೆಯರೂ ಸ್ವರವಚನಗಳನ್ನು ವಚನಗಳಂತೆ ಬರೆದು ಸಂಗೀತದ ಪರಿಪಾಠ ಹಾಕಿಕೊಟ್ಟಿರುವುದನ್ನು ಕಾಣುತ್ತೇವೆ. ರಾಗಗಳನ್ನೂ ಗುರುತಿಸಿ





ದ್ದಾರೆ. ರಾಗ ತಾಳಬದ್ಧ ಪಲ್ಲವಿ – ಅನುಪಲ್ಲವಿ, ಚರಣಗಳಿಂದ ಕೂಡಿರುವ ಸಾವಿರಾರು ಸ್ವರವಚನಗಳನ್ನು ರಚಿಸಿ ಸಂಗೀತ ಕ್ಷೇತ್ರಕ್ಕೆ ವಿಶೇಷ ಕಾಣಿಕೆ ನೀಡಿರುವರು. ಕನ್ನಡದ ಸಂಗೀತಕ್ಷೇತ್ರ ಪ್ರಾರಂಭವಾದದ್ದು ಇವರಿಂದಲೇ ಎನ್ನಬಹುದಾಗಿದೆ.

ಶಿವಶರಣ ಶರಣೆಯರು ಮಾಧವಿ, ಮಲಹರಿದೇವಿ, ಮಂಗಳಕೇಶಿ, ಮಾಳವಗೌಳ, ವಸಂತ, ಭೂಪಾಳಿ, ಚೇಳಿ, ರಾಮಶ್ರೀ, ಗುಂಡಶ್ರೀ, ವರಾಳೀ, ಮಲಹರಿ, ಬೈರವಿ, ನಾಟಿ, ಲಲಿತೆ, ನಾದನಾಮಕ್ರಿಯ, ಧನ್ಯಾಸಿ, ಕನ್ನಡ, ಗೌಳ, ಆರಭಿ, ಶ್ರೀರಾಗ, ಫಲಮಂಜರಿ, ಶಂಕರಾಭರಣ, ಶುದ್ಧಕಾಂಬೋದಿ, ತೆಲುಗು ಕಾಂಬೋದಿ, ಪಂತುವರಾಳಿ, ಸೌರಾಷ್ಟ್ರ, ಅಹರಿ, ನಾರಾಯಣಗೌಳ, ಸಾಳಂಗ ಮೊದಲಾದ ರಾಗಗಳಲ್ಲಿ ಹಾಡುಗಳನ್ನು ರಚಿಸಿರುವುದನ್ನು ಡಾ. ಎಲ್. ಬಸವರಾಜು ಅವರ **'ಶಿವದಾಸ ಗೀತಾಂಜಲಿ'**ಯಲ್ಲಿ ಹಿಡಿದಿಟ್ಟಿರುವುದನ್ನು ಕಾಣಬಹುದಾಗಿದೆ. ಶಿವಶರಣರು ಈ ಸ್ವರವಚನಗಳನ್ನು ಹಾಡುವುದಕ್ಕಾಗಿಯೇ ಬರೆದವುಗಳಾಗಿವೆ. ನಾಲ್ವತ್ತೊಂದು ರಾಗಗಳಲ್ಲಿ ಹಾಡುತ್ತಿದ್ದರೆಂಬುದನ್ನೂ ಗುರುತಿಸಲಾಗಿದೆ.

ಹನ್ನೆರಡನೆಯ ಶತಮಾನದಲ್ಲಿ ಕಿನ್ನರಿಬ್ರಹ್ಮನೆಂಬ ಶರಣನು ಕಿನ್ನರಿ ವಾದ್ಯ ಬಾರಿಸುವ ಕಾಯಕ ಕೈಕೊಂಡಿದ್ದನೆಂದೂ, ಬಹುರೂಪಿ ಚೌಡಯ್ಯ ರಾಮಶ್ರೀ ರಾಗವನ್ನು ಹಾಡುವುದರಲ್ಲಿ ಪಳಗಿದವನಾಗಿದ್ದು ವೇಷಗಾರಿಕೆಯ ಕಾಯಕ ಕೈಕೊಂಡಿದ್ದನೆಂದೂ ಉದಾಹರಿಸಬಹುದಾಗಿದೆ. ನಿಜಗುಣಾದಿ ಶಿವಯೋಗಿಗಳಂತೂ ಸ್ವರವಚನಗಳನ್ನು ರಚಿಸಿ ಕರ್ನಾಟಕ ಸಂಗೀತಕ್ಕೆ ವಿಶೇಷ ಮೆರಗು ತಂದುಕೊಟ್ಟದ್ದಂತೂ ಮರೆಯಲಾಗದ ಮಾತು.



ನಿಜಗುಣ ಶಿವಯೋಗಿಗಳು ಹದಿನೈದನೆಯ ಶತಮಾನದಲ್ಲಿ ಮೈಸೂರು ಜಿಲ್ಲೆ ಕೊಳ್ಳಗಾಲ ಪಕ್ಕದ ಶಂಭುಲಿಂಗಬೆಟ್ಟದಲ್ಲಿ ವಾಸವಾಗಿದ್ದರು. ಇವರು ರಚಿಸಿರುವ ಹಲವಾರು ಶಾಸ್ತ್ರಗ್ರಂಥಗಳಲ್ಲಿ **'ಕೈವಲ್ಯ ಪದ್ಧತಿ'** ಕನ್ನಡ ಸ್ವರವಚನಗಳಿಂದ ಕೂಡಿರುವ ಅತ್ಯುತ್ತಮ ಕೃತಿಯಾಗಿರುತ್ತದೆ. ಇವರು ನಾದನಾಮಕ್ರಿಯ, ಧನ್ಯಾಸಿ, ಶಂಕರಾಭರಣ, ಲಲಿತ, ದೇಶಿ, ಸಾರಂಗ, ಸುವ್ವಾಲಿ, ಬೈರವಿ, ತೋಡಿ, ಕಾಂಬೋದಿ, ಕುರಂಜಿ, ಮಧುಮಾಧವಿ, ಸೌರಾಷ್ಟ್ರ, ವಸಂತ, ಆಹರಿ, ಪಹಡಿ ಪಂತುವರಾಳಿ, ಹಿಂದೋಳಿ, ಪಾರಸಿ, ಕಾನಡ, ಕಾಂಬೋದಿ, ನಾಟಿ, ಕಲ್ಯಾಣಿ, ಮಲಹರಿ, ರೆಗುಪ್ತಿ, ಮುಖಾರಿ ಮೊದಲಾದ ರಾಗಗಳಲ್ಲಿ ಹಾಡುಗಳನ್ನು ರಚಿಸಿ ಕರ್ನಾಟಕದಲ್ಲಿ ಸಂಗೀತಕ್ಷೇತ್ರಕ್ಕೆ ವಿಶೇಷ ಸೇವೆ ಸಲ್ಲಿಸಿರುವುದನ್ನು ಸ್ಮರಿಸಬಹುದಾಗಿದೆ.

ನಿಜಗುಣ ಶಿವಯೋಗಿಗಳಿಗೆ ಶಂಕರಭರಣ ರಾಗದಲ್ಲಂತೂ ಹೆಚ್ಚಿನ ಪ್ರೀತಿಯಿದ್ದದ್ದು ಗಮನಾರ್ಹ. ಶಂಕರಾಭರಣ ರಾಗದಲ್ಲಿ ವೀಣೆ ನುಡಿಸಿ ಹಾಡಿದರೆ ಶಂಭುಲಿಂಗ ಮುಕ್ತಿ ಕೊಡುತ್ತಾನೆಂದು ನಿಜಗುಣರು ಹಾಡಿದ್ದನ್ನು ಇಲ್ಲಿ ಉದಾಹರಿಸಬಹುದಾಗಿದೆ.

*ವರ ಶಂಕರಾಭರಣವನು ಮೇಳವಿಸಿ ಯೋಗ ।*
*ಕರಣವೆಂಬಂಗುಲಿಯನಿಟ್ಟು ಬಾಜಿಸಿ ।*
*ಪರನಾದವೆಂಬ ಗೀತವನು ಗುರುಶಂಭುಲಿಂಗ ।*
*ವರಿದೆಂದು ಮೆಚ್ಚಿ ಮುಕ್ತಿ ಪದವಿಯ ಕೇಳಿಸುವ ।*

**'ಶ್ರೀಗುರುವಚನಾಪದೇಶವನಾಲಿಸಿದಾಗಳಹುದು ನರರಿಗೆ ಮುಕುತಿ'** ಹಾಡಂತೂ ಜನಪ್ರಿಯವಾಗಿದೆ. ನಿಜಗುಣರು ರಚಿಸಿರುವ **'ವಿವೇಕ ಚಿಂತಾಮಣಿ'** ಗ್ರಂಥವೂ ಅವರು ಸಂಗೀತಶಾಸ್ತ್ರದಲ್ಲಿ ನಿಷ್ಣಾತರಿದ್ದರೆಂಬುದಕ್ಕೆ ನಿದರ್ಶನವಾಗಿರುತ್ತದೆ. ವಿವೇಕ ಚಿಂತಾಮಣಿ ಕೃತಿಯು ವಿಶ್ವಕೋಶದಂತಿದ್ದು ಅದರಲ್ಲಿ ಸಂಗೀತಪ್ರಕರಣವೂ ಬಂದಿರುವುದು. ಸ್ವರೋತ್ಪತ್ತಿ, ದಶವಿಧಾನ, ಸಪ್ತಸ್ವರಗಳು, ರಾಗೋತ್ಪತ್ತಿ ಲಕ್ಷಣ, ರಾಗಜಾತಿಗಳು, ರಾಗಾಂಗಗಳು, ಮೂವತ್ತೆರಡು ರಾಗಗಳು, ಮಿಶ್ರರಾಗಗಳು, ಗಾನವೈಖರಿ, ವಾದ್ಯಭೇಗಳು, ತಂತಿಯ ವಾದ್ಯಗಳು, ಗಾಯಕರು, ಮರ್ದಳೆ, ಆವುಜಕಾರರು, ತಾಳಪ್ರಕ್ರಿಯೆ,

ತಾಳಭೇದಗಳು, ನೃತ್ಯಭೇದಗಳು ಇತ್ಯಾದಿ ವಿಷಯಗಳನ್ನು ಈ ಗ್ರಂಥದಲ್ಲಿ ನಿಜಗುಣ ಶಿವಯೋಗಿಗಳು ಮಾರ್ಮಿಕವಾಗಿ ಚಿತ್ರಿಸಿರುವರು.

ನಿಜಗುಣ ಶಿವಯೋಗಿಗಳ ಸಮಕಾಲೀನರಾದ ಮುಪ್ಪಿನ ಷಡಕ್ಷರಿಗಳ ಹಾಡುಗಳನ್ನು 'ಸುಬೋಧಸಾ'ದಲ್ಲಿ ಓದಬಹುದಾಗಿದೆ.

*ಅವರವರ ದರುಶವಕೆ ಅವರವರ ವೇಷದಲಿ ।*
*ಅವರವರಿಗೆಲ್ಲ ಗುರು ನೀನೊಬ್ಬನೆ ।*
*ಅವರವರ ಭಾವಕ್ಕೆ ಅವರವರ ಪೂಜೆಗಂ ।*
*ಅವರವರಿಗೆಲ್ಲ ಶಿವ ನೀನೊಬ್ಬನೆ ।*

ಎಂಬ ಹಾಡಿನಲ್ಲಿ **'ದೇವನೊಬ್ಬ ನಾಮ ಹಲವು'** ಎಂಬ ತತ್ತ್ವವನ್ನು ಮಾರ್ಮಿಕವಾಗಿ ತಿಳಿಸಿದ್ದಾನೆ.

ಇದೇ ರೀತಿ ರಾಮಪುರದ ಬಕ್ಕಪ್ಪ, ನೀರಲಕೆರೆ ಬಸವಲಿಂಗ ಶರಣರು, ಮೈಲಾರ ಬಸವಲಿಂಗ ಶರಣರು, ಕೂಡ್ಲೂರು ಬಸವಲಿಂಗ ಶರಣರು, ಬಾಲಲೀಲಾ ಮಹಾಂತ ಶಿವಯೋಗಿಗಳು, ಘನಮಠದ ನಾಗಭೂಷಣ ಶಿವಯೋಗಿಗಳು, ಕೆಸ್ತೂರು ದೇವ, ಕಡಕೋಳ ಮಡಿವಾಳೇಶ್ವರ, ಸರ್ಪಭೂಷಣ ಶಿವಯೋಗಿಗಳು ಮೊದಲಾದ ನೂರಾರು ಜನ ಶಿವಯೋಗಿಗಳು ಅನುಭಾವಿಗಳು ಸ್ವರವಚನಗಳನ್ನು ಹಾಡಿ ಕನ್ನಡ ಸಾಹಿತ್ಯದ, ಸಂಗೀತ ಹಾಗೂ ಅನುಭಾವ ಕ್ಷೇತ್ರದ ಹರವನ್ನು ಹೆಚ್ಚಿಸಿರುವರು.

ತನುವೆಂಬ ಭಾಂಡ ತೊಳೆಯಹಚ್ಚಿದ್ದಾರೆ. ಅನುಭವ ದಡಗಿಯ ಮಾಡಲು ಹೇಳಿದ್ದಾರೆ. ಶರೀರವೆಂದೆಂಬುವ ಹೊಲ ಹಸನ ಮಾಡಲು ಸಾರಿ, ಪರತತ್ವ ಬೆಳೆಯನ್ನು ಬೆಳೆದು ಉಣ್ಣಲು ಉಪದೇಶಿಸಿರುವರು. ಕಾಯಕಾಂತರವ ಹೊಕ್ಕು ಬೇಂಟೆಯನಾಡಿ ಮಾಯಾಮೋಹದ ಮೃಗಗಳ ಕೊಲ್ಲಹೇಳಿದ್ದಾರೆ. ನಾನೀಂಬುದಬಿಡಲು ಹೇಳಿ ಜ್ಞಾನಿಗಳೊಡನೆ ಆಡಲು ಹೇಳಿರುವರು. ಲೌಕಿಕ ಪಾರಮಾರ್ಥ ಎರಡನ್ನೂ ಕೂಡಿ ನಡೆಸಲು ಸಾರಿರುವರು. ಇಂಥ ಸ್ವರವಚನೋಕ್ತಿಗಳು ಶಿವಯೋಗಿಗಳ ದಿವ್ಯಾನುಭವದ, ಸಂಗೀತ ಸಾಹಿತ್ಯ ಸಮ್ಮಿಲನದ ರನ್ನಗನ್ನಡಿಗಳಾಗಿರುತ್ತವೆ. ಇವುಗಳಲ್ಲಿ ವಚನಗಳಂತೆ ಸತ್ವವಿದೆ; ತತ್ತ್ವವಿದೆ; ಕಾವ್ಯದಿಂದ ಕೂಡಿದ್ದು ರಾಗತಾಳಬದ್ಧವೂ ಆಗಿರುತ್ತವೆ. ವಚನಸಾಹಿತ್ಯ ಸುವರ್ಣಯುಗ ಕಂಡಂತೆ ಸ್ವರವಚನಗಳು ಸುವರ್ಣಯುಗ ಸಾರುವಷ್ಟು ತತ್ತ್ವಭರಿತವಾಗಿದೆ. ವಚನದ ಸ್ವರಗಳನ್ನು ಅರ್ಥಕ್ಕೆ ಬಾಧೆ ಬಾರದ ರೀತಿಯಲ್ಲಿ ತನ್ಮಯರಾಗಿ ಹಾಡಿದಾಗ ಆ ಸಂಗೀತ ಕಲೆಗೆ, ಸಾಹಿತ್ಯ ಸೌರಭಕ್ಕೆ ಎಲ್ಲರೂ ತಲೆಬಾಗುವಂತಾಗುತ್ತದೆ.

ಮಾನವರನ್ನು ಮಾನವೀಯತೆಯಿಂದ ಕಂಡವರು ಶರಣರು. ಮೂಢನಂಬಿಕೆಗಳ ಬಲೆಯಲ್ಲಿ ಕೆಡವಿ ಅಜ್ಞರನ್ನು ಇನ್ನೂ ಅಜ್ಞಾನಕ್ಕೆ ತಳ್ಳಿದವರ ವಿರುದ್ಧ ಕೆಂಡಕಾರಿದವರು ಶರಣರು. ಶೋಷಣೆಯ ವಿರುದ್ಧ ಪ್ರತಿಭಟಿಸಿದವರು ಶರಣರು. ಕೀಳಕುಲದವರೆಂದು ಮುಟ್ಟದೆ ದೂರವಿಟ್ಟವರನ್ನು ಆತ್ಮೀಯತೆಯಿಂದ ಕರೆದು ಸಮಾಜದಲ್ಲಿ ಸರಿಸಮಾನ ಸ್ಥಾನಮಾನ ನೀಡಿದವರು ಶರಣರು. ಸ್ತ್ರೀಯರು ಸ್ವಾತಂತ್ರ್ಯಕ್ಕೆ ಅರ್ಹರಲ್ಲ ಎಂದು ಕಡೆಗಣಿಸಿದವರಿಗೆ ತಿಳಿಹೇಳಿ ಪುರುಷರಷ್ಟೇ ಸಮಾನಸ್ಥಾನ ಕೊಟ್ಟವರು ಶರಣರು. ಕಾಯಕ – ದಾಸೋಹ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತ ದುಡಿಯಹಚ್ಚಿ ಸಮಾನತೆ ಸಾರಿದವರು ಶರಣರು. ತನ್ನ ತಾನಾರೆಂದು ನಿಜದ ನೆಲೆ ಅರಿತುಕೊಳ್ಳಲು ಅರಿವು ಮೂಡಿಸಿಕೊಟ್ಟು ಕೆಳವರ್ಗದವರನ್ನೂ ಸ್ತ್ರೀಯರನ್ನೂ ಷಟ್‌ಸ್ಥಲ ಸಾಧನೆಗಿಳಿಸಿದವರು ಶರಣರು. ಬಾಯಿಲ್ಲದವರಿಗೆ ಬಾಯಿ ಕೊಟ್ಟು ಬರೆಯಹಚ್ಚಿದವರು ಶರಣರು. ಅಂತೆಯೇ ಶರಣರ ಕಾಲದಲ್ಲಿ ಎಲ್ಲ ವರ್ಗದವರು ವಚನಕಾರರೆನಿಸಿದರು; ಶಿವಾನುಭವಿಗಳೆನಿಸಿದರು.

ಕ್ರಿಯಾ ಜ್ಞಾನಗಳ ಸುಂದರ ಸಮನ್ವಯದ ಜೀವನ ನಡೆಸುತ್ತಿದ್ದ, ಪ್ರಪಂಚದಲ್ಲಿದ್ದೂ ಪಾರಮಾರ್ಥಿಕ್ಕೆಳೆಸುತ್ತಿದ್ದ ಶರಣರ ಪ್ರಭಾವ ಜನಮನದ ಮೇಲೆ ಅಚ್ಚೊತ್ತಿಮೂಡಿತು. ಇವರ ಸಾಧನೆ – ಸಿದ್ಧಿಗಳನ್ನು ಪ್ರತಿಭಾಸಂಪನ್ನರು ಕಾವ್ಯ – ಪುರಾಣ – ನಾಟಕ – ಕಥೆ ಹಾಡುಗಳಲ್ಲಿ ಎರಕಹೊಯ್ದರು. ಹರಿಹರ ಮಹಾಕವಿ ರಗಳೆಗಳನ್ನು ಬರೆದ; ಭೀಮಕವಿ ಪುರಾಣ ಬರೆದ. ಹೀಗೆ ಶರಣರನ್ನು ಕುರಿತು ಸಾವಿರಾರು ಕೃತಿಗಳು ಪ್ರಕಟವಾದವು. ಸ್ವತಃ ಶರಣರೇ ತಮಗಾದ ಶಿವಸುಖವನ್ನು ಸಾಮಾನ್ಯರ ಭಾಷೆಯಲ್ಲಿ ಎಲ್ಲರಿಗೂ ತಿಳಿಯುವಂತೆ ಶರಣ ಧರ್ಮದ ತತ್ತ್ವಸಿದ್ಧಾಂತಗಳನ್ನು ವಚನಗಳಲ್ಲಿ ಎರಕಹೊಯ್ದರು.

ಸ್ವರವಚನಗಳ ಸಂಗ್ರಹ, ಸಂಪಾದನೆ, ಪ್ರಕಟಣೆ ಹಾಗೂ ವಿಶ್ಲೇಷಣೆ ಇತ್ತೀಚಿನ ಹಲವಾರು ವರುಷಗಳಿಂದ ಭರದಿಂದ ನಡೆದಿರುವುದು. ಸ್ವರವಚನಗಳ ಸಮಗ್ರ ಸಂಪುಟ ಸಂಗ್ರಹ-ಸಂಪಾದನೆ ಮತ್ತು ಪ್ರಕಟಣೆಗಳ ಕೆಲಸ ಸರಕಾರದಿಂದ ಆದರಲ್ಲಿ ಸಾಹಿತ್ಯ ಕ್ಷೇತ್ರಕ್ಕೆ ದೊಡ್ಡ ಕೊಡುಗೆ ನೀಡಿದಂತಾಗುತ್ತದೆ. ಘನಸರಕಾರ ಈ ದಿಸೆಯಲ್ಲಿ ಕ್ರಮಕೈಗೊಳ್ಳಲೆಂದು ಆಶಿಸುವೆ.

★







# ಅಕ್ಕಮಹಾದೇವಿ

– ಪ್ರೊ. ಶ್ರೀಮತಿ ಎಚ್.ಎಂ. ಬೀಳಗಿ
ಸಾಯಿಕೃಪಾ, ಜಯನಗರ ಕ್ರಾಸ್ ಹತ್ತಿರ,
ಸಪ್ತಾಪುರ, ಧಾರವಾಡ

''ಮಹಾದೇವಿಯಕ್ಕನ ಜೀವನ ಚರಿತ್ರೆ, ಹೆಣ್ಣಿನ ಗೌರವ ಸಾಧನೆಯ ಹೆಣ್ಣಿನ ಸ್ವಾತಂತ್ರ್ಯ ಸಾಧನೆಯ, ಹೆಣ್ಣಿನ ಪರಮಾರ್ಥ ಸಾಧನೆಯ ಒಂದು ಮಹಾಪ್ರಕರಣ'' – ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ ಅವರ ಈ ಮಾತು. ಮಹಾದೇವಿಯಕ್ಕನ ಉಜ್ವಲ ವ್ಯಕ್ತಿತ್ವಕ್ಕೆ ಬರೆದ ಒಂದು ವ್ಯಾಖ್ಯೆ. ಸಂಪ್ರದಾಯ ವಿರೋಧಿಯಾಗಿ, ತನಗೆ ಸರಿಕಂಡಂತೆ ತನ್ನ ಬದುಕನ್ನು ರೂಪಿಸಿ ಕೊಂಡು, ವ್ಯಕ್ತಿಸ್ವಾತಂತ್ರ್ಯವನ್ನು ಮೆರೆದ ಮಹಾಚೇತನ, ಅಕ್ಕ. ಹರಿಹರನ 'ಮಹಾದೇವಿಯಕ್ಕನ, ರಗಳೆ', ಚಾಮರಸನ ಪ್ರಭುಲಿಂಗ ಲೀಲೆ', ಎಳಂದೂರು ಹರೀಶ್ವರನ 'ಪ್ರಭುದೇವರ ಪುರಾಣ', 'ಚೆನ್ನಬಸವ ಪುರಾಣ', ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ', ರಾಚಕವಿಯ 'ಮಹಾದೇವಿಯಕ್ಕನ ಸಾಂಗತ್ಯ', ಶೂನ್ಯ ಸಂಪಾದನೆಗಳು – ಇವು ಅಕ್ಕನ ಜೀವನ ಚರಿತ್ರೆಗೆ ಆಕರ ಕೃತಿಗಳು.



ಮಹಾದೇವಿಯಕ್ಕನನ್ನು ಕುರಿತು ಕಾವ್ಯ ರಚಿಸಿದ ಕವಿಗಳಲ್ಲಿ, ಆಕೆಯ ವೈವಾಹಿಕ ಘಟನೆಗೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯವಿದೆಯಾದರೂ, ಜನನ ಬಾಲ್ಯಗಳ ವಿಷಯದಲ್ಲಿ ವ್ಯತ್ಯಾಸ ಕಂಡುಬರುವುದಿಲ್ಲ. ಎಲ್ಲ ಕವಿಗಳು ಹೇಳಿರುವಂತೆ ಆಕೆಯ ಜನ್ಮಸ್ಥಳ 'ಉಡುತಡಿ', ಆದರೆ ಈ ಉಡುತಡಿ ಯಾವುದು ಎಂಬ ಬಗ್ಗೆ ಒಮ್ಮತವಿಲ್ಲ. ಕಲಬುರ್ಗಿ ಜಿಲ್ಲೆಯ 'ಮಹಾಗಾಂವ' ಗ್ರಾಮವೆ ಅಕ್ಕನ ಜನ್ಮಸ್ಥಳವಾದ ಉಡುತಡಿ ಆಗಿರಬಹುದೆಂಬುದು ಒಂದು ಅಭಿಪ್ರಾಯ. ಶಿವಮೊಗ್ಗ ಜಿಲ್ಲೆಯ ಬಳ್ಳಿಗಾಂವಿ ಸಮೀಪದ 'ಉಡುಗಣಿ- ತಡುಗಣಿ' ಪ್ರದೇಶವೆ ಅಂದಿನ 'ಉಡುತಡಿ'ಯಾಗಿದ್ದು, ಬನವಾಸಿ ಮಂಡಲೇಶ್ವರನಿಗೆ ಆಧೀನವಾದ ಆ ಗ್ರಾಮಕ್ಕೆ ಕೌಶಿಕ ನಾಯಕಾಗಿರಬಹುದೆಂದು ಹೇಳುವ ಅಭಿಪ್ರಾಯ ಇನ್ನೊಂದು. ಹರಿಹರ ಆಕೆಯ ತಂದೆ- ತಾಯಿಗಳು, ಶಿವಭಕ್ತ-ಶಿವಭಕ್ತೆಯರೆಂದು ಸಾಂಕೇತಿಕ ನಾಮಗಳಲ್ಲಿ ಗುರುತಿಸಿದ್ದರೆ, ಚಾಮರಸ ಇನ್ನೊಂದು ಅರ್ಥದಲ್ಲಿ ನಿರ್ಮಲ-ಸುಮತಿಯರೆಂದು ಹೇಳಿದ್ದಾನೆ. ಗಿರಿಜೆಯ ಸಾತ್ವಿಕ ಕಳೆಯೇ ಮಹಾದೇವಿ, ಆಕೆ ದೈವಾಂಶಸಂಭೂತಳು, ಆಕೆಯ ಬಾಲಲೀಲೆಗಳೆಲ್ಲ ಶಿವಲೀಲೆಗಳೇ ಆಗಿದ್ದವು ಎಂದು ಎಲ್ಲ ಪ್ರಾಚೀನ ಕವಿಗಳು ಹೇಳಿದ್ದಾರೆ.

ಶಿವಭಕ್ತಿಸಂಪನ್ನೆಯಾಗಿ, ಸೌಂದರ್ಯವತಿಯಾಗಿ ಬೆಳೆದು ಯೌವನದಲ್ಲಿ ಕಾಲಿರಿಸಿದ ಅಕ್ಕ, ವೈಹಾಳಿಯಿಂದ ಮರುಳುತ್ತಿದ್ದ ಕೌಶಿಕನ ದೃಷ್ಟಿಗೆ ಬಿದ್ದಾಗ ಆಕೆಯ ಬದುಕಿನಲ್ಲಿ ಸಂಘರ್ಷ ಆರಂಭವಾಗುತ್ತದೆ.

ಅನನ್ಯ ರೂಪವತಿಯಾದ ಅಕ್ಕನನ್ನು ಕಂಡು ಕೌಶಿಕ ಮೋಹಿತನಾದನೆಂದು ಎಲ್ಲ ಕವಿಗಳು ಹೇಳಿದ್ದರೂ, ಆಕೆಯ ಮದುವೆ ಹಾಗೂ ಸಾಂಸಾರಿಕ ಜೀವನದ ವಿಷಯದಲ್ಲಿ ಸ್ಪಷ್ಟವಾದ ಭಿನ್ನಾಭಿಪ್ರಾಯವಿದೆ. ಅಧಿಕಾರದ ಬಲದಿಂದ ಕೌಶಿಕನಿಂದ ತಂದೆ ತಾಯಿಗಳಿಗೊದಗಿದ ವಿಪತ್ತನ್ನು ಪರಿಹರಿಸುವುದಕ್ಕೋಸ್ಕರ ಮನಸ್ಸಿಲ್ಲದ ಮನಸ್ಸಿನಿಂದ ಮೂರು ಪಣಗಳನ್ನು ಮುಂದಿಟ್ಟು, ಕೌಶಿಕನೊಂದಿಗೆ ಮದುವೆಯಾಗಿ, ಕೆಲದಿನ ಸಾಂಸಾರಿಕ ಜೀವನ ಸಾಗಿಸಿದ ಅಕ್ಕ, ಕೌಶಿಕ ಕೊಟ್ಟ ಮಾತನ್ನು ನಡೆಸದೆ ಹೋದಾಗ, ಉಡುತಡಿ ತೊರೆದು ಹೊರಟಳೆಂದು 'ಹರಿಹರ' ಹೇಳುತ್ತಾನೆ. ಇದೇ ವಿಚಾರಸರಣಿ ಚೆನ್ನಬಸವಾಂಕನ 'ಮಹಾದೇವಿಯಕ್ಕನ ಪುರಾಣ' ಹಾಗೂ ಕೆಂಚವೀರಣ್ಣೊಡೆಯರ 'ಶೂನ್ಯ ಸಂಪಾದನೆ'ಗಳಲ್ಲಿ ನಿರೂಪಿತವಾಗಿದೆ.

ಇದಕ್ಕೆ ವ್ಯತಿರಿಕ್ತ ಅಭಿಪ್ರಾಯ 'ಚಾಮರಸ'ನದು. ಪರಿಸ್ಥಿತಿಯ ಒತ್ತಡಕ್ಕೆ ಮಣಿದು ಮಹಾದೇವಿ ಮದುವೆಯಾಗದೆ ಅರಮನೆಗೆ ಹೋಗಿ ವ್ರತಸ್ಥಳಾಗಿ ಉಳಿಯುತ್ತಾಳೆ. ಮುಂದೆ ಕೌಶಿಕ ಆಗ್ರಹಪಡಿಸಿದಾಗ ''ನೀನು ಸಲೆ ಶಿವಭಕ್ತನಾದೊಡೆ ಕೂಡುವೆನು ನಿನ್ನ, ನೀನು ಭವಿಯಾಗಿರ್ದೊಡೊಲ್ಲೆನು'' ಎನ್ನಲು, ಆತ 'ನಮಗೆ ಶಿವಭಕ್ತಿಯನು ಮಾಡುವ ಸಮಯವಳವಡದು' ಎನ್ನುತ್ತಾನೆ. ಕೂಡಲೆ 'ನಮಗೆ ನಿಮ್ಮಯ ಸಂಗವಳವಡದೆಂದು ಹೇಳಿದ. ಅಕ್ಕ, ಉಟ್ಟುಡುಗೆಯನು ತೊಡಿಗೆಯನು ಅರಸನಿಗಿತ್ತು ಬಂಧನಮುಕ್ತಳಾಗಿ ಉಡುತಡಿಯಿಂದ ಹೊರಟಳೆಂದು ಚಾಮರಸ ಹೇಳಿದ್ದಾನೆ. ಮಹಾದೇವಿಯಕ್ಕ ವೀರವಿರಾಗಿಣಿ ಎನ್ನುವ ಚಾಮರಸನ ವಾದವನ್ನು ಎತ್ತಿ ಹಿಡಿದವರಲ್ಲಿ, ವಿರೂಪಾಕ್ಷ (ಚೆನ್ನಬಸವ ಪುರಾಣ), ಎಳಂದೂರು ಹರೀಶ್ವರ (ಪ್ರಭುದೇವರ ಪುರಾಣ), ಶೂನ್ಯ ಸಂಪಾದನೆಗಳ ಕರ್ತೃಗಳಾದ ಹಲಗೆಯ ದೇವರು ಹಾಗೂ ಗೂಳೂರು

ಸಿದ್ದವೀರಣ್ಣೊಡೆಯರು ಪ್ರಮುಖರು. ಅಂದಿನಿಂದ ಇಂದಿನವರೆಗೂ ಈ ಅಭಿಪ್ರಾಯ ಭೇದ ಉಳಿದುಕೊಂಡು ಬಂದಿದೆ. ಶ್ರೀ ಎಂ.ಆರ್.ಶ್ರೀ, ಶ್ರೀ ಡಿ.ಎಲ್.ಎನ್. ತೀನಂಶ್ರೀ, ಡಾ. ಎಂ. ಚಿದಾನಂದಮೂರ್ತಿ – ಮೊದಲಾದ ವಿದ್ವಾಂಸರು ಹರಿಹರನ ನಿಲುವನ್ನು ಒಪ್ಪಿಕೊಂಡಿದ್ದರೆ, ಪ್ರೊ. ಸಂ.ಶಿ. ಭೂಸನೂರಮಠ, ಡಾ. ಆರ್.ಸಿ. ಹಿರೇಮಠ, ಡಾ. ಹೆಚ್. ತಿಪ್ಪೇರುದ್ರಸ್ವಾಮಿ ಇವರು ಚಾಮರಸನ ಅಭಿಪ್ರಾಯವನ್ನು ಸಮರ್ಥಿಸಿದ್ದಾರೆ. ಇಷ್ಟೇ ಅಲ್ಲ. ಅಕ್ಕನನ್ನು ಕೇಂದ್ರವಾಗಿರಿಸಿಕೊಂಡು ರಚನೆಯಾದ ಹೊಸಗನ್ನಡ ಕಾದಂಬರಿಗಳೂ ಈ ದ್ವಿವಿಧ ಜಾಡಿನಿಂದ ಮುಕ್ತವಾಗಿಲ್ಲ. ಶ್ರೀ ಬಸವರಾಜ ಕಟ್ಟೀಮನಿಯವರ 'ಗಿರಿಯ ನವಿಲು' ಹರಿಹರನ ಮಾರ್ಗವನ್ನು ಪ್ರತಿನಿಧಿಸುತ್ತಿದ್ದರೆ. ಡಾ. ಹೆಚ್. ತಿಪ್ಪೇರುದ್ರಸ್ವಾಮಿಯವರ 'ಕದಳಿ ಕರ್ಪುರ' ಚಾಮರಸನ ಮತಕ್ಕೆ ಬದ್ಧವಾಗಿದೆ.

ಕವಿಗಳ ಅಭಿಪ್ರಾಯಗಳನ್ನುಳಿದು, ಅಕ್ಕಮಹಾದೇವಿಯ ಸಂಸಾರ-ಮಾಯಾ ಸಂಬಂಧಿಯಾದ ಕೆಲವು ವಚನಗಳನ್ನೂ ಪರಿಶೀಲಿಸಬಹುದು.

*''ಸಂಸಾರವೆಂಬ ಹಗೆಯಯ್ಯಾ ಎನ್ನ ತಂದೆ*
*ಎನ್ನ ವಂಶವಂಶದಪ್ಪದೆ ಅಱಸಿಕೊಂಡು ಬರುತ್ತಿದೆಯಯ್ಯಾ*
*ಎನ್ನುವನಱಸಿಯಱಸಿ ಹಿಡಿದು ಕೊಲ್ಲುತ್ತಿದೆಯಯ್ಯಾ*
*ನಿನ್ನ ನಾ ಮೆಱೆಹೊಕ್ಕೆ ಕಾಯಯ್ಯ''*

''ಬಿಟ್ಟೆನೆಂದಡೆ ಬಿಡದೀ ಮಾಯೆ, ಬಿಡದಿದ್ದಡೆ ಬೆಂಬತ್ತಿತ್ತು ಮಾಯೆ''. ''ಸಂಸಾರ ಸಂಗದಲ್ಲಿರ್ದೆ ನೋಡಾ ನಾನು'', 'ಮಾಯದ ಸಂಸಾರದಲ್ಲಿ ಸಿಲುಕಿದೆನು' – ಇಂತಹ ಹಲವಾರು ವಚನಗಳು, ಅಕ್ಕ ಒಲ್ಲದ ಮನಸ್ಸಿನಿಂದಾದರೂ ಸರಿ, ಕೆಲ ದಿನ ಲೌಕಿಕ ಬಂಧನದಲ್ಲಿ ಸಿಲುಕಿರಬಹುದೇನೋ ಎಂದು ಊಹಿಸಲು ಅವಕಾಶ ಕೊಡುತ್ತವೆ. ಅಷ್ಟಕ್ಕೂ ಅಕ್ಕ ವಿವಾಹಿತಳೆಂದೇ ಭಾವಿಸಲಿ ಅಥವಾ ಅವಿವಾಹಿತಳೆಂದೇ ತೀರ್ಮಾನಿಸಲಿ, ಆಕೆಯ ಪ್ರತಿಷ್ಠೆಯ ವ್ಯಕ್ತಿತ್ವಕ್ಕೇನೂ ಕುಂದು ಬರುವುದಿಲ್ಲ.

ಮಹಾದೇವಿಯಕ್ಕನ ಜೀವನದ ಎರಡನೆಯ ಮಹತ್ವದ ಘಟ್ಟ, ಕಲ್ಯಾಣ ಪ್ರವೇಶ, ಉಡುತಡಿಯಿಂದ ಹೊರಟ ಅಕ್ಕ ಕಲ್ಯಾಣಕ್ಕೆ ಆಗಮಿಸಿ ಪ್ರಭುದೇವನೊಡ್ಡುವ ಅಗ್ನಿಪರೀಕ್ಷೆಗೆ ಒಳಗಾಗಿ, ಅಲ್ಲಿ ಕೆಲ ಕಾಲ ತಂಗಿ ನಂತರ ಪ್ರಭುವಿನ ಅಪ್ಪಣೆ ಯಂತೆ ಶ್ರೀಶೈಲಕ್ಕೆ ತೆರಳಿದ ವಿಚಾರವನ್ನು ಕಾಲದ ದೃಷ್ಟಿಯಿಂದ ಶರಣಯುಗಕ್ಕೆ ಹತ್ತಿರದವನಾದ ಹರಿಹರನನ್ನುಳಿದು ಎಲ್ಲ ಕವಿಗಳೂ ಹೇಳಿದ್ದಾರೆ. ಮಹಾದೇವಿಯಕ್ಕನ ವಚನಗಳಲ್ಲೂ ಇದಕ್ಕೆ ಪುಷ್ಟಿ ದೊರೆಯುತ್ತದೆ. ಶೂನ್ಯಸಂಪಾದನೆಕಾರರು, ಅಕ್ಕ, ಮಾರ್ಗಮಧ್ಯ ದಲ್ಲಿ ಕಿನ್ನರಿ ಬೊಮ್ಮಯ್ಯನ ಪರೀಕ್ಷೆಯನ್ನು ಎದುರಿಸ ಬೇಕಾಯಿತೆಂಬ ಹೊಸ ಅಂಶವನ್ನು ಸೇರಿದ್ದಾರೆ. ಈ ಸನ್ನಿವೇಶಕ್ಕೆ ಪೂರಕವಾಗಬಲ್ಲ ಆಧಾರಗಳು 'ಪ್ರಭುಲಿಂಗಲೀಲೆ'ಯಲ್ಲಾಗಲಿ, ವಚನಗಳಲ್ಲಾಗಲಿ ದೊರೆಯುವುದಿಲ್ಲ ವಾದ್ದರಿಂದ ಮಹಾದೇವಿಯಕ್ಕನ ಅತ್ಯಂತ ಉಜ್ವಲವಾದ ವೈರಾಗ್ಯದ ಸಿರಿ ಯನ್ನು ಎತ್ತಿ ತೋರುವುದಕ್ಕಾಗಿ ಸೃಷ್ಟಿಗೊಂಡ ಕವಿಕಲ್ಪಿತ ಘಟನೆಗಳಿವಾಗಿರ ಬಹುದೆಂದು ತೋರುತ್ತದೆ.

ಅನುಭವ ಮಂಟಪದಲ್ಲಿ ಕಾಲಿಟ್ಟ ಅಕ್ಕನನ್ನು ಅಲ್ಲಮಪ್ರಭು, ಶರಣರ ಸಮ್ಮುಖದಲ್ಲಿಯೇ ಒರೆಗೆ ಹಚ್ಚಿ, ಆಕೆಯ ಹಿರಿಮೆಯನ್ನು ಗುರುತಿಸಿದ ಪ್ರಸಂಗ, ಒಂದು ಸಂಪಾದನೆಯಾಗಿ ವಿಸ್ತೃತ ಗೊಂಡಿದೆ. (ಶೂನ್ಯಸಂಪಾದನೆ.. 'ಮಹಾದೇವಿಯಕ್ಕಂಗಳ ಸಂಪಾದನೆ') ಪ್ರಭು ಒಡ್ಡುವ ಸವಾಲುಗಳಿಗೆ 'ಲಿಂಗ ಮೆಚ್ಚಿ ಅಹುದೆನ್ನುವಂತೆ' ಉತ್ತರಿಸಿದಾಗ ಆಕೆಯ ಅಪಾರವಾದ ಜ್ಞಾನಾನುಭವ, ಆಧ್ಯಾತ್ಮಿಕ ನಿಲುವನ್ನು ಕಂಡು ಮೆಚ್ಚಿಕೊಂಡ ಶರಣರು, ಆಕೆಗೆ ಅಲ್ಲಿ ಉನ್ನತಸ್ಥಾನ ಕಲ್ಪಿಸಿಕೊಡುತ್ತಾರೆ. ವಯಸ್ಸಿನಲ್ಲಿ ಕಿರಿಯಳಾದರೂ ಅನುಭವ-ಅನುಭಾವಗಳ ದೃಷ್ಟಿಯಿಂದ ಹಿರಿಯಳೆನಿಸಿ, ಶರಣರ ಗೌರವಾದರಗಳಿಗೆ ಪಾತ್ರಳಾಗಿ ಕೆಲಕಾಲ ಅಲ್ಲಿದ್ದು ನಂತರ ಅಲ್ಲಮನ ಅಪ್ಪಣೆಯಂತೆ ಶ್ರೀಶೈಲಕ್ಕೆ ಹೊರಡುತ್ತಾಳೆ. ನೆರೆದ ಶರಣ ಗಣಕ್ಕೆ, 'ನಿಮ್ಮ ಮಂಡೆಗೆ ಹೂವು ತಾರೆನಲ್ಲದೆ ಹುಲ್ಲು ತಾರೆನು' ಎಂದು ಹೇಳಿ, ಅವರಿಂದ ಬೀಳ್ಕೊಂಡು ಶ್ರೀಶೈಲಕ್ಕೆ ಬಂದು ತಪಗೈದು, ಕದಳಿಯಲ್ಲಿ ಐಕ್ಯಳಾಗುತ್ತಾಳೆ. ಅಕ್ಕನನ್ನು ಕುರಿತು ಕೃತಿ ರಚಿಸಿದ ಕವಿಗಳೆಲ್ಲ, ಶ್ರೀಶೈಲದ ಕದಳಿಯಲ್ಲಿ ಆಕೆ ಬಯಲಾದಳೆಂದು ಬಣ್ಣಿಸಿದ್ದಾರೆ.

ವಚನಗಳು : ಮಹಾದೇವಿಯಕ್ಕ ಬಸವಾದಿ ಶರಣರ ಸಮಕಾಲೀನೆ. ಆಕೆಯ ಕಾಲ ಕ್ರಿ.ಶ. ಸು. ೧೧೬೦ ಎನ್ನುವುದು ನಿರ್ವಿವಾದ. ಕನ್ನಡ ಸಾಹಿತ್ಯದ ಪ್ರಥಮ ಹಾಗೂ ಶ್ರೇಷ್ಠ ಕವಿಯಿತ್ರಿಯೆನಿಸಿದ ಅಕ್ಕನ ಸಾಹಿತ್ಯಿಕ ಸಂಪತ್ತು ಗುಣ ಹಾಗೂ ಗಾತ್ರದ ದೃಷ್ಟಿಯಿಂದ ಸಮೃದ್ಧ. ಮೂರುನೂರಾ ಐವತ್ತು ವಚನಗಳು, ಸೃಷ್ಟಿಯ ವಚನ, 'ಯೋಗಾಂಗತ್ರಿವಿಧಿ' ಹಾಗೂ ಅನೇಕ ಪದಗಳು. ಇದಿಷ್ಟು ಅಕ್ಕನ ಕರ್ತೃತ್ವದಲ್ಲಿ ಮೂಡಿಬಂದ ಸಾಹಿತ್ಯರಾಶಿ. 'ಚೆನ್ನಮಲ್ಲಿಕಾರ್ಜುನ', 'ಚೆನ್ನಮಲ್ಲಿಕಾರ್ಜುನ ದೇವ' – ಅಕ್ಕ ಬಳಸಿಕೊಂಡ ವಚನಾಂಕಿತಗಳು. ಬೋಧನಾ ಕ್ರಮ, ಲೋಕನೀತಿಯ ಪ್ರತಿಪಾದನೆ, ವ್ರತನಿಯಮಗಳ ನಿರೂಪಣೆ, ತೀವ್ರ ವಿಡಂಬನೆ – ಇವುಗಳಿಗೆ ಅಕ್ಕನ ವಚನಗಳಲ್ಲಿ ಇಂಬು ದೊರೆತಿಲ್ಲ. ಆಕೆಯ ವಚನಗಳ ಕೇಂದ್ರ ವಿಷಯ, ಆತ್ಮ ವಿಶ್ಲೇಷಣೆ, ಪ್ರಾರ್ಥನೆ. ಎಲ್ಲಕ್ಕೂ ಹೆಚ್ಚಾಗಿ ಮನದೊಡೆಯ ಚೆನ್ನಮಲ್ಲಿಕಾರ್ಜುನನ ಬಗೆಗೆ ಉತ್ಕಟವಾದ ಪ್ರೀತಿಯ ಪರಮಾವಧಿ. ''ಅಕ್ಕನ ವಚನಗಳು ಅವಳ ಆತ್ಮಚರಿತ್ರೆಯ ಮತ್ತು ವ್ಯಕ್ತಿತ್ವದ ಜೀವಂತ ಮತ್ತು ಜ್ವಲಂತ ಅಭಿವ್ಯಕ್ತಿಯಾಗಿವೆ''.

ಅಕ್ಕ ತನ್ನ ವೈಯಕ್ತಿಕ ಜೀವನದ ಬಗ್ಗೆ ಎಲ್ಲಿಯೂ ಹೇಳಿಕೊಂಡಿಲ್ಲವಾದರೂ ಅನೇಕ ವಚನಗಳು ಆಕೆಯ ಜೀವನದಲ್ಲಿ ನಡೆದಿರಬಹುದಾದ ಘಟನೆಗಳನ್ನು ಧ್ವನಿಸುತ್ತವೆ. ಒಬ್ಬ ಮಹಿಳೆಯಾಗಿ, ಸಾಮಾಜಿಕ ಮೌಲ್ಯಗಳನ್ನು ಅಲ್ಲಗಳೆದು ತನ್ನತನವನ್ನು ಮರೆಯುವ ಸಾಹಸ ಮಾಡಿದುದು, ಅಂದಿನ ಕಟ್ಟುನಿಟ್ಟಾದ ವ್ಯವಸ್ಥೆಯಲ್ಲಿ, ಸುಲಭ ಸಾಧ್ಯವಾದು ದಲ್ಲ. ಮಾನವ ಸಹಜ ಭಾವಗಳನ್ನು ನಿರ್ಭಾವಗೊಳಿಸಿಕೊಳ್ಳುವಲ್ಲಿಯ ಆಂತರಿಕ ಹೊಯ್ದಾಟ, ತೊಳಲಾಟ, ವೇದನೆ ಇವೆಲ್ಲವುಗಳು ಅಕ್ಕನನ್ನು ಸಂದೇಹಕ್ಕೀಡು ಮಾಡಿರಬಹುದು. ಇಂತಹ ಮಾಯಾಪಾಶ ಹರಿದು, ತನ್ನ ಸಾಧನೆಯ ಮಾರ್ಗವನ್ನು ಸುಗಮಗೊಳಿಸಬೇಕೆಂದು ಪರಮಾತ್ಮನಲ್ಲಿ ಅನನ್ಯ ಭಕ್ತಿಯಿಂದ ಪ್ರಾರ್ಥಿಸಿದ್ದಾಳೆ.



ಶಿವಶರಣೆಯರು

*ಎನ್ನ ಮಾಯದ ಮದವ ಮುಱಿಯಯ್ಯಾ*
*ಎನ್ನ ಕಾಯದ ಕತ್ತಲೆಯ ಕಳೆಯಯ್ಯಾ*
*ಎನ್ನ ಜೀವದ ಜಂಜಡವ ಮಾಣಿಸಯ್ಯಾ*
*ಎನ್ನ ದೇವ ಚೆನ್ನಮಲ್ಲಿಕಾರ್ಜುನಯ್ಯಾ*
*ಎನ್ನ ಸುತ್ತಿದ ಪ್ರಪಂಚವ ಬಿಡಿಸಾ ನಿಮ್ಮ ಧರ್ಮ*

ಇಂತಹ ಅನೇಕ ವಚನಗಳನ್ನು ಉದಾಹರಿಸಬಹುದು. ಲೌಕಿಕ ಬಂಧನದಿಂದ ಕಳಚಿಕೊಳ್ಳುವಲ್ಲಿ ಅಕ್ಕ ಅನುಭವಿಸಿರಬಹುದಾದ ಮಾನಸಿಕ ಯಾತನೆ ಇಲ್ಲಿಯ ಸ್ಥಾಯಿಯಾಗಿದೆ.

ಎಂಟುನೂರು ವರುಷಗಳ ಹಿಂದೆ, ಕಟ್ಟುನಿಟ್ಟಾದ ವೈವಾಹಿಕ ಕಟ್ಟಳೆಯನ್ನು ಮೀರಿ ಏಕಾಂಗಿಯಾಗಿ ಹೊರಟ ತುಂಬುಜವ್ವನೆ, ಸೌಂದರ್ಯವತಿ ಅಕ್ಕ, ಮಾರ್ಗದಲ್ಲಿ ಅನೇಕ ಆಪತ್ತುಗಳನ್ನು ಎದುರಿಸಬಹುದು. ಸಂಕಷ್ಟಗಳಿಗೆ ಗುರಿಯಾಗಿರಬಹುದು. ಬಂದ ಭಾಗ್ಯವನ್ನು ತಿರಸ್ಕರಿಸಿ ಹೊರಟ ಆಕೆ ಜನಾಪವಾದಕ್ಕೆ ಗುರಿಯಾಗಿರಬಹುದು. ''ಮುಡಿಬಿಟ್ಟ ಮೊಗಬಾಡಿ ತನುಕರಗಿದವಳ ಎನ್ನನೇಕೆ ನುಡಿಸುವಿರಿ? ಎನ್ನನೇಕೆ ಕಾಡುವಿರಿ'' ಎಂದು ನೋವು, ಸಂಕಟ ತುಂಬಿದ ಧ್ವನಿಯಲ್ಲಿ ಕೇಳಿದ ಅಕ್ಕ, ''ತಾನು ಭಕ್ತೆಯಾಗಿ ಚಿನ್ಮಯಲಿಂಗ ಚೆನ್ನಮಲ್ಲಿಕಾರ್ಜುನನ ಕೂಡಿ ಕುಲಿವಳಿದವಳು'' ಎಂದು ಹೆಜ್ಜೆ ಹೆಜ್ಜೆಗೆ ಸಾರುತ್ತ ಹೊರಟಿದ್ದಾಳೆ.

*''ಹೆದರದಿರು ಮನವೆ, ಬೆದರದಿರುವ ತನುವೆ*
*ನಿಜವನಱಿತು ನಿಶ್ಚಿಂತನಾಗಿರು*
*ಫಲವಾದ ಮರನ ಕಲ್ಲಲಿ ಇಡುವುದೊಂದು ಕೋಟಿ;*
*ಎಲವದ ಮರನ ಇಡುವರೊಬ್ಬರ ಕಾಣೆ,*
*ಭಕ್ತಿಯುಳ್ಳವರ ಬೈವರೊಂದು ಕಾಣೆ*
*ಭಕ್ತಿಯಿಲ್ಲದವರ ಬೈವರೊಬ್ಬರ ಕಾಣೆ ..........''*

ಬಂದ ಲೋಕಾಪವಾದ, ಕುಹುಕ ನುಡಿಗಳನ್ನು ಸ್ವೀಕರಿಸಿ ತನ್ನಷ್ಟಕ್ಕೆ ಸಂತೈಸಿಕೊಂಡ ಅಕ್ಕ, ಕ್ಷಣಿಕವಾದ ಐಹಿಕ ಕಷ್ಟ-ಸುಖಗಳಿಗೆ ಕುಗ್ಗುವ ಅಲ್ಪ ಹೃದಯಿಯಲ್ಲ. ''ಲೋಕದಲ್ಲಿ ಹುಟ್ಟಿದ ಬಳಿಕ ಸ್ತುತಿ-ನಿಂದೆಗಳು ಬಂದಡೆ ಮನದಲಿ ಕೋಪವ ತಾಳದೆ ಸಮಾಧಾನಿಯಾಗಿರಬೇಕು'' ಎಂಬ ಸಿದ್ಧಾಂತವನ್ನು ರೂಢಿಸಿಕೊಂಡವಳು. 'ಏನಮಾಡಿದಡೂ ಆನಂಜುವಳಲ್ಲ' ಎಂಬ ಸವಾಲು ಹಾಕುವ ಧೈರ್ಯವಂತೆ. ಚೆನ್ನಮಲ್ಲಿಕಾರ್ಜುನನ್ನೇ ಆತ್ಮಸಂಗಾತಿಯಾಗಿ ಗ್ರಹಿಸಿ, ಹಸಿವು, ತೃಷೆಗಳಂತಹ ಬಾಧೆಗಳನ್ನು ನಿಗ್ರಹಸಿಕೊಳ್ಳಬಲ್ಲೆನೆಂಬ ಧೀಮಂತೆ. ನನ್ನ ಜೀವನದಲ್ಲಿ ತಾನಿರಿಸಿಕೊಂಡ ಗುರಿಯನ್ನು ತಲುಪಿಯೇ ತೀರಬೇಕೆಂಬ ಛಲ ಆಕೆಯದು. ಹೀಗಾಗಿ ಚೇತನಾಚೇತನ ರೂಪದಲ್ಲಿ ಬಂದ ಅಡೆ- ತಡೆಗಳನ್ನು ಉಡಿಯೊಡ್ಡಿ ಸ್ವೀಕರಿಸಿದ್ದಾಳೆ. ಅವುಗಳನ್ನೇ ಸಿದ್ಧಿಯ ಸೋಪಾನವಾಗಿರಿಸಿಕೊಂಡಿದ್ದಾಳೆ.

*ಕಿಡಿಕಿಡಿ ಕೆದಱಿದಡೆ ಎನಗೆ ಹಸಿವು ತೃಷೆಯಡಗಿತ್ತೆಂಬೆನು.*
*ಮುಗಿಲು ಹಱಿದು ಬಿದ್ದಡೆ ಎನಗೆ ಮಜ್ಜನಕ್ಕೆಱೆದರೆಂಬೆನು*
*ಗಿರಿ ಮೇಲೆ ಬಿದ್ದಡೆ ಎನಗೆ ಪುಷ್ಪವೆಂಬನು*
*ಚನ್ನಮಲ್ಲಿಕಾರ್ಜುನಯ್ಯಾ*
*ಶಿರಹರಿದು ಬಿದ್ದಡೆ ಪ್ರಾಣ ನಿಮಗರ್ಪಿತವೆಂಬೆನು.*

ಲೋಕರೂಢಿ ಪ್ರವಾಹದ ವಿರುದ್ಧ ಈಸಲು ಹೊರಟ ಅಕ್ಕನ ಸಂಕಲ್ಪಶಕ್ತಿ, ನಿಜಕ್ಕೂ ಅಚ್ಚರಿ ಮೂಡಿಸುತ್ತದೆ. ತನ್ನ ಹೆಣ್ತನ ತನ್ನ ವೈರಾಗ್ಯ ಸಾಧನೆಗೆ ಆಂತಕವಾಗಲಾರದೆಂದು ತೋರಿಸಿಕೊಟ್ಟ ಅಕ್ಕ ಪ್ರಚಲಿತವಿದ್ದ ಮೌಲ್ಯಗಳನ್ನು ಒಪ್ಪಿಕೊಳ್ಳದೆ ಲಿಂಗಪತಿಯನ್ನು ಒಪ್ಪಿಕೊಂಡು ''ಲಿಂಗವು ಬಂದೆನ್ನ ಅಂಗದೊಳು ನೆಲಸಲು ಅಂಗವು ಲಿಂಗದೊಳಗಾದ ಕಾರಣವು ಹಿಂಗಿದವು ಎನ್ನ ಭವಂಗಳು'' ಎನ್ನುವ ಲಿಂಗತಾದಾತ್ಮ ಭಾವವನ್ನು ಗಟ್ಟಿಗೊಳಿಸಿಕೊಂಡವಳು.

'ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವ' ಪರಶಿವನನ್ನೇ ಪತಿಯಾಗಿ ಸ್ವೀಕರಿಸಿದ ಅಕ್ಕನ 'ಶರಣಸತಿ ಲಿಂಗಪತಿ' ಭಾವದ ಆಧ್ಯಾತ್ಮಿಕ ವಿಕಳಾವಸ್ಥೆಯ ವಚನಗಳು ಉತ್ಕೃಷ್ಟವಾಗಿದ್ದು ಪರಮಾತ್ಮನನ್ನು ಕಾಣಬೇಕೆಂಬ ಕಾತರತೆ ಅಲ್ಲಿ ಮೈವೆತ್ತು ನಿಂತಿದೆ. ''ಎನ್ನ ದೇವ ಚೆನ್ನಮಲ್ಲಿಕಾರ್ಜುನ ದೇವರಲ್ಲದೆ ಮಿಕ್ಕಿನ ಗಂಡರೆಲ್ಲ ಮುಗಿಲ ಮಱೆಯ ಬೊಂಬೆಯಂತೆ,'' 'ಎರದ ಮುಳ್ಳಿನಂತೆ' ಎಂದಿರುವ ಅಕ್ಕ ಅಲೌಕಿಕ, ಅಗೋಚರ ಪತಿಯ ದಿವ್ಯ ಸ್ವರೂಪವನ್ನು ಸಾಕಾರರೂಪದಲ್ಲಿ ಕಂಡರಿಸಿದ ಬಗೆ ಅತಿ ಸುಂದರ.

*''ಕಂಗೊಳೊಳಗೆ ತೊಳಗಿ ಬೆಳಗುವ ದಿವ್ಯರೂಪದ ಕಂಡು*
*ಮೈಮಱೆದೆನವ್ವಾ*
*ಮಣಿ ಮುಕುಟದ ಫಣಿಕಂಕಣದ ನಗೆಮೊಗದ*
*ಸುಲಿಪಲ್ಲ ಸೊಬಗನ ಕಂಡು ಮನಸೋತೆನವ್ವಾ.*
*ಇಂತಾಗಿ ಚೆನ್ನಮಲ್ಲಿಕಾರ್ಜುನನೆನ್ನ ಮದುವಣಿಗ.*
*ಆನು ಮದುವಣಿಗಿ ಕೇಳಾ ತಾಯೇ''*

''ಅಕ್ಕ ಕೇಳಾ, ಕೇಳವ್ವಾ ಕೆಳದಿ'' ಎಂದು ಆತ್ಮೀಯ ಸಂಬೋಧನೆಯೊಂದಿಗೆ, ತಾನೊಂದು ಕನಸ ಕಂಡ ಪರಿಯನ್ನು ಹೇಳ-ಹೇಳುತ್ತ ಅಮೂರ್ತ ಪತಿಯನ್ನು ಮೂರ್ತೀಕರಿಸಿ ಪರಿಚಯಿಸು ತ್ತಾಳೆ. ''ವನವೆಲ್ಲಾ ನೀನೆ ವನದೊಳಗಣ ದೇವ ತರುವೆಲ್ಲಾ ನೀನೆ. ತರುವಿನೊಳಗಾಡುವ ಖಗಮೃಗವೆಲ್ಲಾ ನೀನೆ'' ಎಂದು ಆತನ ವಿಶ್ವವ್ಯಾಪಿತ್ವವನ್ನು ನೆನೆಯುತ್ತಾಳೆ. ಆತನ ಇರುವು ''ನೆಲದ ಮರೆಯ ನಿಧಾನದಂತೆ, ಫಲದ ಮರೆಯ ರುಚಿಯಂತೆ'' ಇರುವುದನ್ನು ಕಂಡು ಕೌತುಕಪಡುತ್ತಾಳೆ. ಒಮ್ಮೆ ಅಳಿಸಂಕುಳ, ಮಾಮರ, ಬೆಳದಿಂಗಳು, ಕೋಗಿಲೆಗಳಿಗೆ ತನ್ನೊಡೆಯ ಚೆನ್ನಮಲ್ಲಿಕಾರ್ಜುನನನ್ನು ಕಂಡರೆ ಕರೆದು ತೋರಬೇಕೆಂದು ಬೇಡಿಕೊಂಡರೆ, ಮತ್ತೊಮ್ಮೆ, 'ಚಿಲಿಪಿಲಿಯೆಂದು ಓದುವ ಗಿಳಿ' 'ಸರವತ್ತಿ ಪಾಡುವ ಕೋಗಿಲೆ' ಎರಗಿಬಂದಾಡುವ ತುಂಬಿ, ಕೊಳನ ತಡಿಯೊಳಗಾಡುವ ಹಂಸೆ' ಗಿರಿಗಹ್ವರದೊಳಗೆ ಆಡುವ ನವಿಲು'ಗಳಿಗೆ ತನ್ನ ನಲ್ಲನೆಲ್ಲಿಹನೆಂದು ಕೇಳಿಕೊಳ್ಳುತ್ತಾಳೆ. ಅಗೋಚರ, ಅತೀತನಾದ ಆರಾಧ್ಯದೈವವನ್ನು ಸೃಷ್ಟಿಸಿ ಚರಾಚರ ವಸ್ತುಗಳಲ್ಲಿ ಕಾಣಬಯಸಿದ ಅಕ್ಕನ ತೀವ್ರ, ಹಂಬಲ, ನಿಸರ್ಗಪ್ರೇಮ – ಇಂತಹ ವಚನಗಳಲ್ಲಿ ಸ್ಫುರಿಸಿದೆ.

ಅನುಭವ ಮಂಟಪದ ಪರಿಸರದಲ್ಲಿ ತನ್ನ ಆಧ್ಯಾತ್ಮಿಕ ಜೀವನಕ್ಕೆ ಪರಿಪೂರ್ಣತೆಯನ್ನು ತಂದುಕೊಂಡ ಅಕ್ಕನಿಗೆ ಕಲ್ಯಾಣ ಹಾಗೂ ಶರಣರ ಬಗೆಗೆ ಅಪಾರವಾದ ಗೌರವವಿದೆ. ಅದನ್ನು ಅನೇಕ ವಚನಗಳಲ್ಲಿ,

ಮಡಿವಾಳಯ್ಯ, ಸಿದ್ಧರಾಮ, ಬಸವಣ್ಣ, ಚನ್ನಬಸವಣ್ಣ, ಅಜಗಣ್ಣ, ಅಲ್ಲಮಪ್ರಭು, ಘಟ್ಟಿವಾಳಯ್ಯ, ಮೊದಲಾದವರನ್ನು ಸ್ಮರಿಸುವ ಮೂಲಕ ಅಭಿವ್ಯಕ್ತಿಸಿದ್ದಾಳೆ, ''ಕಲ್ಯಾಣ ಕೈಲಾಸವೆಂಬ ನುಡಿ ಹಸನಾಯಿತ್ತು'' 'ಆಸೆ ಆಮಿಷ ಅಳಿದವಂಗಲ್ಲದೆ, ಒಳಹೊರಗು ಶುದ್ಧನಾದಂಗಲ್ಲದೆ ಕಲ್ಯಾಣವ ಹೊಗಬಾರದು'' – ಹೀಗೆಂದು ಕಲ್ಯಾಣದ ಮಹತಿಯನ್ನು ಕೊಂಡಾಡಿದ ಅಕ್ಕ ಶರಣರ ಗೌರವಕ್ಕೂ ಪಾತ್ರಳಾಗಿದ್ದಾಳೆ. ''ಎನ್ನ ಹೆತ್ತ ತಾಯಿ ಮಹಾದೇವಿಯಕ್ಕನ ನಿಲವ ನೋಡಾ ಪ್ರಭುವೆ (ಬಸವಣ್ಣ), ಕೂಡಲಚೆನ್ನ ಸಂಗಯ್ಯನಲ್ಲಿ ಬೆರಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹಾದೇವಿ ಅಕ್ಕಂಗಾಯಿತು'' (ಚೆನ್ನಬಸವಣ್ಣ) ''ತನ್ನ ಸ್ವಾನುಭವದ ಉದಯದಿಂದ ತನ್ನ ತಾನರಿದ ನಿಜಶಕ್ತಿ ತನ್ನಿಂದ ತಾನಾದಳು ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ'' (ಅಲ್ಲಮಪ್ರಭು) ಎಂದು ಹಿರಿಯ ಶರಣರು ಆಕೆಯ ಹಿರಿಯತನವನ್ನು ಮನದುಂಬಿ ಕೊಂಡಾಡಿದ್ದಾರೆ.

ಸಾಹಿತ್ಯಿಕ ದೃಷ್ಟಿಯಿಂದ ಮಹಾದೇವಿಯಕ್ಕನ ವಚನಗಳಿಗೆ ಅಗ್ರಪಟ್ಟ, ಗುಣ-ಗಾತ್ರದ ದೃಷ್ಟಿಯಿಂದ ಶಿವರಣೆಯರಲ್ಲಿಯೆ, ಆಕೆಯ ವಚನ ಸಂಪತ್ತು ಅಮೌಲ್ಯ. ಕಾವ್ಯ ಸೃಷ್ಟಿ ಆಕೆಯ ಉದ್ದೇಶವಲ್ಲ. ಆದರೂ ಮಧುರ ಭಕ್ತಿಯ ಆವೇಶದ ಅಭಿವ್ಯಕ್ತಿಯಲ್ಲಿ ರೂಹುಗೊಂಡ ಭಾವಗೀತಾತ್ಮಕ ಶೈಲಿ, ಒಂದರ ಹಿಂದೊಂದು ನುಸುಳಿಕೊಂಡು ಬರುವ ಉಪಮಾ, ರೂಪಕ, ದೃಷ್ಟಾಂತಾದಿ ಅಲಂಕಾರಗಳು, ವಚನಗಳಿಗೆ ಕಾವ್ಯಾಂಶದ ಸಂದರ ಆವರಣವನ್ನು ಕಟ್ಟಿಕೊಡುತ್ತವೆಂಬುದಕ್ಕೆ ಪ್ರಸಿದ್ಧವಾದ ಈ ವಚನವನ್ನು ಉಲ್ಲೇಖಿಸಬಹುದು.

*ತನು ಕರಗದವರಲ್ಲಿ ಮಜ್ಜನವನೊಲ್ಲೆಯಯ್ಯಾ ನೀನು*
*ಮನ ಕರಗದವರಲ್ಲಿ ಪುಷ್ಪವನೊಲ್ಲೆಯಯ್ಯಾ ನೀನು.*
*ಹದುಳಿಗರಲ್ಲದವರಲ್ಲಿ ಗಂಧಾಕ್ಷತೆಯನೊಲ್ಲೆಯಯ್ಯಾ ನೀನು*
*ಅಱಿವು ಕಣ್ದೆಱೆಯದವರಲ್ಲಿ ಆರತಿಯನೊಲ್ಲೆಯಯ್ಯಾ ನೀನು*
*ಭಾವಶುದ್ಧವಿಲ್ಲದವರಲ್ಲಿ ಆರತಿಯನೊಲ್ಲೆಯಯ್ಯಾ ನೀನು*
*ಪರಿಣಾಮಗಳಿಲ್ಲದವರಲ್ಲಿ ನೈವೇದ್ಯವನೊಲ್ಲೆಯಯ್ಯಾ ನೀನು*
*ಎನ್ನಲ್ಲಿ ಏನುಂಟೆಂದು ಕರಸ್ಥಲವನಿಂಬುಗೊಂಡೆ.*
*ಹೇಳಾ ಚೆನ್ನಮಲ್ಲಿಕಾರ್ಜುನಯ್ಯಾ.*

ಈ ವಚನದ ಕೇಂದ್ರಬಿಂದು ಚೆನ್ನಮಲ್ಲಿಕಾರ್ಜುನ, ತನು, ಮನ, ಅರಿವು ಭಾವಶುದ್ಧವಿಲ್ಲದವರಿಂದ ಏನನ್ನು ಅಪೇಕ್ಷಿಸದ, ಸ್ವೀಕರಿಸಿದ ಆತ ಒಲುಮೆಗೆ ಸರ್ವಸಮರ್ಪಣ ಭಾವ ಅಗತ್ಯ. ಅಂತಹ ಚೆನ್ನಮಲ್ಲಿಕಾರ್ಜುನ ಅಕ್ಕನಿಗೆ ಒಲಿದು, ಆಕೆಯ ಕರಸ್ಥಲದಲ್ಲಿ ಇಂಬುಗೊಂಡಿದ್ದಾನೆ. ಅಂತರ ನಿರೀಕ್ಷಣೆಯ ಈ ಭಾವ ವಚನದಲ್ಲಿ ಬಿಚ್ಚಿಕೊಳ್ಳುತ್ತ ಹೋಗುತ್ತದೆ. ಭಾವಪೂರ್ಣವಾದ ಈ ವಚನ-ಇಂತಹ ಹಲವಾರು ವಚನಗಳಲ್ಲಿ ಲಾಲಿತ್ಯ ಮಾಧುರ್ಯಗಳು ಮೈವತ್ತು ನಿಂತಿವೆ.

''ಲೋಕದ ಚೇಷ್ಟೆಗೆ ರವಿಬೀಜವಾದಂತೆ ಕರಣಂಗಳ ಚೇಷ್ಟೆ ಮನೆವೆ ಬೀಜ'', 'ಅರಿಯದವರ ಸಂಗ, ಕಲ್ಪ ಹೊಯ್ದು ಕಿಡಿಯ ತೆಗೆದುಕೊಂಬುತೆ, 'ಬಲ್ಲವರ ಸಂಗ ಮೊಸರ ಹೊಸದು ಬೆಣ್ಣೆಯ ತೆಗೆದುಕೊಂಡಂತೆ' ನೊಣಕ್ಕೆ ಹಾರುವಂತೆ ಆಪ್ಯಾಯನ ಬಿಡದು', 'ಬಲ್ಲಿದ ಹಗೆಯವ ತಗೆವನ್ನಬರ ಬಡವರ ಹರಣ ಹಾರಿಹೋದ ತೆರನಂತಾಯಿತ್ತು' 'ತಾಯಿ ನೊಂದರೆ ಒಡಲ ಶಿಶು ನೋವತೆರನಂತೆ' – ಅಕ್ಕನ ಅನನ್ಯ ಭಕ್ತಿಯ ಅಭಿವ್ಯಕ್ತಿಯಲ್ಲಿ ಹುಲುಸಾಗಿ ಹುಟ್ಟಿಕೊಂಡ ಇಂತಹ ಅಲಂಕಾರಗಳೆಷ್ಟೊ! 'ಕೊಳಲ ದನಿಗೆ ಸರ್ಪ ತಲೆದೂಗಿದಡೇನು? ಒಳಗಣ ವಿಷದ ಬಯಕೆ ಬಿಡದನ್ನಕ್ಕ'. 'ಚಂದನವ ಕಡಿದು ಕೊಱೆದು ತೇದಡೆ ನೊಂದನೆಂದು ಕಂಪಬಿಟ್ಟಿತ್ತೇ' – ಮುಂತಾದ ದೃಷ್ಟಾಂತಗಳಿಗೂ ಕೊರತೆಯಿಲ್ಲ.

'ನೊಂದವರ ನೋವ ನೋಯದವರೆತ್ತ ಬಲ್ಲರೊ' 'ಹುಸಿಯೆಂಬುದೆ ಹೊಲೆ', 'ಬಂಜೆ, ತಾಯಿಯ ಬೇನೆಯನಱೆವಳೆ', 'ನಿತ್ಯತೃಪ್ತಂಗೆ ನೈವೇದ್ಯದ ಹಂಗೇಕೆ', 'ಚಿನ್ನದ ಕತ್ತಿಯಲ್ಲಿ ತಲೆಹೊಯ್ದಡೆ ಸಾಯದಿರ್ಪರೆ'? – ಗಾದೆಯಂತಹ ಧ್ವನಿಪೂರ್ಣ, ಅರ್ಥಗರ್ಭಿತ ಮಾತಗಳು ಅಕ್ಕನ ವಚನಗಳ ಅರ್ಥಶ್ರೀಮಂತಿಕೆಗೆ ದ್ಯೋತಕವಾಗಿವೆ. ''ಉದಯಾಸ್ತಮಾನವೆಂಬೆರಡು ಕೊಳಗದಲ್ಲಿ ಆಯುಷ್ಯವೆಂಬ ರಾಶಿ ಅಳೆದು ತೀರದ ಮುನ್ನ ಶಿವನ ನೆನೆಯಿರೆ'' – ಎಂಬ ವಚನಾಂತರಾಳದಲ್ಲಿ ಹುದುಗಿದ ಕಲ್ಪಕಶಕ್ತಿ ವಿನೂತನ ವಾದುದು; ಅದ್ಭುತವಾದುದು. 'ಈಳೆ ನಿಂಬೆ ಮಾವು ಮಾದಲಕ್ಕೆ ಹುಳಿನೀರನೆರೆಚಿದವರಾರಯ್ಯ' – ಸೃಷ್ಟಿಯ ವೈಚಿತ್ರಗಳನ್ನು ಗುರುತಿಸುವ ಅಕ್ಕನ ಸೌಂದರ್ಯದೃಷ್ಟಿ, ಪರಿಸರ ಪ್ರಜ್ಞೆ ಇಲ್ಲಿ ಗಮನಸೆಳೆಯುತ್ತದೆ. ಹೀಗೆ ಅಕ್ಕನ ವಚನಗಳು ಉತ್ತಮ ಕಾವ್ಯಾಂಶಗಳಿಂದ ಕೂಡಿದ ಅನುಭಾವ ಗೀತೆಗಳಾಗಿವೆ. ''ಅಧ್ಯಾತ್ಮ ಶೃಂಗಾರದ ಸ್ಥಾಯೀಭಾವವು ತನ್ನ ಎಲ್ಲ ಸಂಚಾರಿಗಳೊಡನೆ ಬಂದು ಮಾರ್ಗಕಾವ್ಯ ದಲ್ಲಿಯ ಲೌಕಿಕ ಶೃಂಗಾರದ ಅದೆ ಅದೆತನದಿಂದ ಬೇಸತ್ತ ಮನಸ್ಸಿಗೆ ಹೊಸ ಒಂದು ರಸದ ಸವಿಯನ್ನುಣ್ಣಿಸುತ್ತದೆ.'' 'ಸ್ವಾನುಭವಜನಿತವೂ ಅರ್ಥಪೂರ್ಣವೂ ಭಾವಗರ್ಭಿತವೂ ರಸಾತ್ಮಕವೂ ಆದ ಅವಳ ವಚನಗಳು ಉತ್ಕೃಷ್ಟ ಸಾಹಿತ್ಯ ಮಾತ್ರವಲ್ಲ; ಉಜ್ಜೀವಕ ಸಾಹಿತ್ಯ, ದಿವ್ಯ ಸಾಹಿತ್ಯ'' – ವಿದ್ವಾಂಸರ ಇಂತಹ ಮಾತುಗಳು ಅಕ್ಕನ ವಚನಗಳ ವೈಶಿಷ್ಟ್ಯ ಹಾಗೂ ಕಾವ್ಯಗುಣಗಳನ್ನೂ ಸಮರ್ಥಿಸುತ್ತವೆ.

ಮಹಾದೇವಿಯಕ್ಕನ ಶರಣ ಸಮೂಹದಲ್ಲಿಯೇ ಶ್ರೇಷ್ಠ ಅನುಭಾವಿ ಸಮಕಾಲೀನ ಶರಣರ ಮುಕ್ತ ಮನಸ್ಸಿನ ಪ್ರಶಂಸೆಯೇ ಇದಕ್ಕೆ ಸಾಕ್ಷಿ.

*ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ.*
*ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ.*
*ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ.*
*ಅಜಗಣ್ಣನ ಐದು ವಚನಕ್ಕೆ ಕೂಡಲ ಸಂಗಯ್ಯನಲ್ಲಿ*
*ಮಹಾದೇವಿಯಕ್ಕನ ಒಂದು ವಚನ ನಿರ್ವಚನ ಕಾಣಾ*
*ಸಿದ್ಧರಾಮಯ್ಯಾ.*

ದಿವ್ಯಜ್ಞಾನಿ ಚೆನ್ನಬಸವಣ್ಣನ ಈ ವಚನ, ಆಧ್ಯಾತ್ಮಿಕ ನೆಲೆಯಲ್ಲಿ ಅಕ್ಕನ ವಚನಗಳ ಗುರುತ್ವವನ್ನು ಗುರುತಿಸುವ ಒರೆಗಲ್ಲು.

ಹೀಗೆ, ಆಧ್ಯಾತ್ಮಕ ಚಿಂತಕಿ ಅಕ್ಕ, ಅಂದು ಇಂದು, ಎಂದಿಗೂ ಶ್ರೇಷ್ಠ ಅನುಭಾವ ಕವಿಯಿತ್ರಿಯಾಗಿ ಉಳಿಯುತ್ತಾಳೆ.

❖





# ಆಸ್ಥಾನ ವಿದ್ವಾನ್, ಕೀರ್ತನ ಕೇಸರಿ ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿ

– ಹೀ.ಚಿ. ಶಾಂತವೀರಯ್ಯ
ಸಾಹಿತಿಗಳು,
೯, ಮನುವನ, ವಿಜಯನಗರ,
ಬೆಂಗಳೂರು – ೫೬೦ ೦೪೦.

''ಪ್ರತಿಭಾನಂ ಶಾಸ್ತ್ರವಿದ್ಯಾ ಪ್ರಚಯ ಪರಿಚಯಂ ಜ್ಞಾನಕೆ ಕಾರಣಂ'' ಎಂಬ ಆರ್ಯೋಕ್ತಿ ಆಸ್ಥಾನ ವಿದ್ವಾನ್, ಪದ್ಮಶ್ರೀ ಡಾ. ಶಿವಮೂರ್ತಿ ಶಾಸ್ತ್ರೀಯವರನ್ನೇ ಕುರಿತು ರಚಿತವಾಗಿರ ಬೇಕು. ಏಕೆಂದರೆ ಶಾಸ್ತ್ರಿಯವರು ಅಸಾಧಾರಣ ಪ್ರತಿಭಾ ವಂತರು, ಹಲವಾರು ಶಾಸ್ತ್ರಗಳನ್ನು ಪರಿಚಯ ಮಾಡಿಕೊಂಡ ವರು. ವಿದ್ವಾನ್ ಪಿ.ಆರ್. ಕರಿಬಸವಶಾಸ್ತ್ರೀ, ಮಾಗಡಿ ವೀರಪ್ಪಶಾಸ್ತ್ರೀ ಮತ್ತು ಮೈಸೂರು ಶಿವಪ್ಪ ಶಾಸ್ತ್ರೀಯವರ ಸೇವೆ ಮಾಡಿದವರು. ಸತತ ಅಧ್ಯಯನಶೀಲರೂ ಪ್ರಯತ್ನಶೀಲರೂ ಆದ ಶಾಸ್ತ್ರೀಜಿಯವರ ಸಾಹಿತ್ಯ ಸೇವೆ ಮತ್ತು ಅವರು ರಚಿಸಿದ ಸಾಹಿತ್ಯ ಕೃತಿಗಳು ಈ ಮಾತಿಗೆ ಸಾಕ್ಷಿಯಾಗಿದೆ.

ಶಿವಮೂರ್ತಿ ಶಾಸ್ತ್ರಿಗಳು ತುಮಕೂರಿನ ಹುಲಿಕುಂಟೆ ಮಠದ ಬಸವಸ್ವಾಮಿ ಮತ್ತು ನೀಲಮ್ಮನವರ ಮಗನಾಗಿ ೨೩-೨-೧೯೦೩ ರಲ್ಲಿ ಜನಿಸಿದರು ೧೯೧೮ರಲ್ಲಿ ಮುಲ್ಕಿ ಮತ್ತು ಅಪ್ಪರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣ ರಾಗಿ ಗುಬ್ಬಿಯ ವೆಸ್ಲಿಯನ್ ಮಿಷನ್ ಶಾಲೆಯಲ್ಲಿ ಅಧ್ಯಾಪಕರಾಗಿ (೧೯೨೪- ೨೬) ಸೇವೆಸಲ್ಲಿಸಿ, ನಂತರ ಕೀರ್ತನ ಕಲೆಗೆ ಮಾರು ಹೋಗಿ ಅದನ್ನು ಮೈಗೂಡಿಸಿಕೊಂಡು ಆಶುಕವಿಗಳಾಗಿ ರೂಪುಗೊಂಡರು. ೧೯೨೮ರಲ್ಲಿ ಮೈಸೂರು ಮಹಾರಾಜರು ತುಮಕೂರಿಗೆ ಬಂದಾಗ ''ನಾಲ್ವಡಿ ಕೃಷ್ಣರಾಜ ವಿಳಾಸ'' ಎಂಬ ಕಾವ್ಯವನ್ನು ರಚಿಸಿ, ಪರಿಸಿ ರಾಜ ಮಾನ್ಯತೆಯನ್ನು ಪಡೆದು ಕೀರ್ತಿವಂತರಾದವರು.

ಬಿ. ಶಿವಮೂರ್ತಿ ಶಾಸ್ತ್ರೀಯವರು ಬೆಂಗಳೂರನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಸಾಹಿತ್ಯ ಮತ್ತು ಸಂಸ್ಕೃತಿ ಬಗ್ಗೆ ಆಳವಾಗಿ ಸಂಶೋಧನೆ ಮಾಡುತ್ತ, ಪ್ರವಚನ, ಹರಕಥೆ, ಹರಿಕಥೆ, ಪುರಾಣ ಮೊದಲಾದವುಗಳನ್ನು ಜೊತೆ ಜೊತೆಯಲ್ಲಿ ನಡೆಸಿಕೊಂಡು ಬಂದರು. ಧರ್ಮ, ಸಾಹಿತ್ಯ, ಸಂಸ್ಕೃತಿಗಳ ಬಗ್ಗೆ ನಾಡಿನ ಪ್ರಸಿದ್ಧ ಪತ್ರಿಕೆಗಳಾದ 'ಜಯಕರ್ನಾಟಕ, ಶಿವಾನುಭವ, ವಿಶ್ವ ಕರ್ನಾಟಕ, ಲೋಕಮತ, ನವಕರ್ನಾಟಕ ಮತ್ತು ತಾಯಿನಾಡು ಪತ್ರಿಕೆಗಳಲ್ಲಿ ಅಸಂಖ್ಯ ಲೇಖನಗಳನ್ನು ಬರೆದು ನಾಡು ಮತ್ತು ನುಡಿಗೆ ಚಿರಪರಿಚಿತರಾದರು.

ಈ ಮಧ್ಯೆ ಶಾಸ್ತ್ರೀಜಿಯವರು ಪುರಾಣ ಪ್ರವಚನ ಮಾಡಲು ನಿಜಗುಣರ ಪುರಾತನ ತ್ರಿವಿಧಿ, ರಾಘವಾಂಕರ ವೀರೇಶ ಚರಿತೆ, ಕೊಂಡಗುಳಿ ಕೇಶಿರಾಜರ ಷಡಕ್ಷರ ಮಂತ್ರ ಮಹಿಮೆ, ಗುರುಸಿದ್ಧನ ಮಾದೇಶ್ವರ ಸಾಂಗತ್ಯ, ವೀರಶೈವ ಸಾಹಿತ್ಯ ಮತ್ತು ಇತಿಹಾಸ, ವೀರಶೈವ ಪುಣ್ಯ ಪುರುಷರು, ಕರ್ನಾಟಕ ಸಂದರ್ಶನ ಮೊದಲಾದ ಗ್ರಂಥಗಳನ್ನು ಸಂಪಾದಿಸಿ ರಚಿಸಿದರು.

೧೯೪೩ರಲ್ಲಿ 'ಶರಣ ಸಾಹಿತ್ಯ' ಮಾಸಪತ್ರಿಕೆಯನ್ನು ಪ್ರಾರಂಭಿಸಿ ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ವಿಷಯಗಳನ್ನು ಕುರಿತು ನೂರಾರು ಲೇಖನ ಗಳನ್ನು ರಚಿಸಿ ಪ್ರಕಟಿಸುವುದರ ಜೊತೆಗೆ ನೂರಾರು ಹೊಸ ಲೇಖಕರನ್ನು ನಾಡಿಗೆ ಪರಿಚಯಮಾಡಿಕೊಟ್ಟರು. 'ಸ್ವತಂತ್ರ ಕರ್ನಾಟಕ' ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿ, ಕರ್ನಾಟಕದ ಏಕೀಕರಣ ಚಳುವಳಿಗೆ ಮಹತ್ವ ನೀಡಿದರು.

ಬಿ. ಶಿವಮೂರ್ತಿ ಶಾಸ್ತ್ರಿಯವರು ಇಡೀ ರಾಷ್ಟ್ರದಲ್ಲಿ ಸಂಚಾರಮಾಡಿ ಅರಮನೆ, ಗುರುಮನೆ, ಜನಮನೆಗಳಲ್ಲಿ ಸಾವಿರಾರು ಕೀರ್ತನೆ, ಪ್ರವಚನ, ಪುರಾಣ, ವ್ಯಾಖ್ಯಾನಮಾಡಿ ಕೀರ್ತನ ಪ್ರಪಂಚಕ್ಕೆ ಒಂದು ಹೊಸ ಆಯಾಮವನ್ನು ನೀಡಿದರು. 'ದೇಶ ತಿರುಗಿ ಕೋಶ ಓದಿ' ನಾಡನ್ನು ಸೀಮಂತಗೊಳಿಸಿದ ವ್ಯಕ್ತಿ.

೧೯೫೬ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಮೇಲೆ ಅದಕ್ಕೊಂದು ಇತಿಹಾಸ ಸೃಷ್ಟಿಸಿ ಕೇವಲ ಒಂದೇ ಒಂದು ಸಾವಿರ ರೂಪಾಯಿಗಳ ಅನುದಾನವಿದ್ದ ಕನ್ನಡ ಸಾಹಿತ್ಯ ಪರಿಷತ್ತಿಗೆ ಲಕ್ಷೋಪಲಕ್ಷಗಳ ಅನುದಾನ ಬರುವಂತೆ ಅನುಪಮ ಶ್ರಮ ಸಾಧನೆ ಮಾಡಿದವರು ಅವರು. ಕನ್ನಡ ನಿಘಂಟು, ಕನ್ನಡ ವಿಶ್ವಕೋಶ ಮೊದಲಾದ ಯೋಚನೆ ಮತ್ತು ಯೋಜನೆಗಳು ಶಾಸ್ತ್ರೀಜಿ ಅವರು ಕೂಸುಗಳು. ಕನ್ನಡ ಸಾಹಿತ್ಯ ಪರಿಷತ್ತಿಗೆ ಮತ್ತು ಕನ್ನಡ ಸಾಹಿತ್ಯಕ್ಕೆ ಇತಿಹಾಸ ಸೃಷ್ಟಿಸಿದ ಇತಿಹಾಸ ಪುರುಷರು ಅವರು.

ತಮ್ಮ ಈ ಸಾಹಿತ್ಯ ಸೇವೆ ಎಡೆಬಿಡದಂತೆ ನಡೆಯಬೇಕೆಂದು 'ಸ್ವತಂತ್ರ ಕರ್ನಾಟಕ ಪ್ರೆಸ್' ಸ್ಥಾಪಿಸಿ ಹಲವಾರು ಗ್ರಂಥಗಳನ್ನು ಮುದ್ರಿಸಿ, ಪ್ರಕಟಿಸಿ, ಕನ್ನಡ ಮುದ್ರಣ ರಂಗದಲ್ಲಿಯೂ ಕೈಯಾಡಿಸಿದವರು ಇವರು.

'ಶೂಲಪಾಣಿ' ಎಂಬ ಕಾವ್ಯನಾಮದಿಂದ ಸಹಸ್ರಾರು ಕವನಗಳನ್ನು ರಚಿಸಿ ಕನ್ನಡ ತಾಯಿ ರಾಜ ರಾಜೇಶ್ವರಿಯ ಸಿರಿಮುಡಿಯನ್ನು ಅಲಂಕರಿಸಿದರು.

'ಶರಣರ ಸಾಹಿತ್ಯ' ನಾಡಿನ ಪತ್ರಿಕೋದ್ಯಮ ಪ್ರಪಂಚದಲ್ಲಿ ಒಂದು ವಿಶಿಷ್ಟವಾದ ದಾಖಲೆಯನ್ನು ನಿರ್ಮಿಸಿತು. ೧೯೩೭ರಲ್ಲಿ ಪ್ರಾರಂಭವಾಗಿ ೧೯೭೬ರಲ್ಲಿ ನಿಂತಿತು. ಸುಮಾರು ನಲವತ್ತು ವರ್ಷಗಳ ಸಾರ್ಥಕ ಸೇವೆ ಸಲ್ಲಿಸಿದ 'ಶರಣರ ಸಾಹಿತ್ಯ' ೪೮೦ ಸಂಚಿಕೆಗಳಲ್ಲಿ ಸುಮಾರು ಇಪ್ಪತ್ತು ಸಾವಿರ ಪುಟಗಳಲ್ಲಿ ಐದು ಸಾವಿರಕ್ಕಿಂತ ಹೆಚ್ಚು ಲೇಖಕರ ಲೇಖನಗಳನ್ನು ಪ್ರಕಟಿಸಿ ನೂತನ ದಾಖಲೆ ಸ್ಥಾಪಿಸಿತು.

'ಶರಣ ಸಾಹಿತ್ಯ' ಪತ್ರಿಕೆ ಜೊತೆಗೆ ನೆನಪಿಗೆ ಬರುವ ಮತ್ತೊಂದು ಪತ್ರಿಕೆ ಡಾ. ಮಾಸ್ತಿವೆಂಕಟೇಶ ಅಯ್ಯಂಗಾರ್ ಅವರ 'ಜೀವನ' ಪತ್ರಿಕೆ. ಇದರ ಜೊತೆಗೆ ಹೆಸರಿಸಬಹುದಾದ ಮತ್ತೊಂದು ಪತ್ರಿಕೆಯೆಂದರೆ ಫ.ಗು. ಹಳಕಟ್ಟಿಯವರ 'ಶಿವಾನುಭವ' ಈ ಮೂರು ಪತ್ರಿಕೆಗಳ ಸೇವೆ ನಿಜಕ್ಕೂ ಸ್ಮರಣೀಯವಾದುದು.

ಶಾಸ್ತ್ರೀಜಿಯವರು ಸಾಹಿತಿಗಳಲ್ಲ, ಇತಿಹಾಸಕಾರರಲ್ಲ, ವಿಮರ್ಶಕರಲ್ಲ, ಕವಿಗಳಲ್ಲ, ಸಂಶೋಧಕರಲ್ಲ ಮತ್ತು ಸಂಪಾದಕರಲ್ಲ ಅವರು ಕೇವಲ ಕಿರಿಯ ಪ್ರಾಥಮಿಕ ಶಾಲೆಯ ಕನ್ನಡ ಅಧ್ಯಾಪಕರು. ವೃತ್ತಿಯಲ್ಲಿ ಉಪಾಧ್ಯಾಯರಾದ ಶಾಸ್ತ್ರೀಜಿ ಅವರು ಪ್ರವೃತ್ತಿಯಲ್ಲಿ ಉಪನ್ಯಾಸಕರಾದರು. ಪ್ರವಚನ ಪುರಾಣ ಹರಿಕಥೆಯನ್ನು ರೂಢಿಸಿಕೊಂಡು ಸಾಹಿತ್ಯದ ವಾರಾಶಿಯಲ್ಲಿ ಕೈ ಹಾಕಿದರು, ಚರಿತ್ರೆಯನ್ನು ಚರ್ವಣ ಮಾಡಿದರು, ಗ್ರಂಥಗಳನ್ನು ಸಂಪಾದಿಸಿದು. ಅನೇಕರ ಗ್ರಂಥಗಳನ್ನು ವಿಮರ್ಶಿಸಿದರು. ನೂರಾರು ಕವನಗಳನ್ನು ರಚಿಸಿ ಕವಿಗಳೂ, ವಿದ್ವಾಂಸರೂ, ಸಂಶೋಧಕರೂ, ವಿಮರ್ಶಕರೂ ಆದರು. ತಮ್ಮ ಪ್ರವಾಸಕಾಲದಲ್ಲಿ ಲಭ್ಯವಾದ ನೂರಾರು ಹಸ್ತಪ್ರತಿಗಳನ್ನು ಸಂಗ್ರಹಿಸಿ, ಸಂಪಾದಿಸಿ ತಮ್ಮ 'ಶರಣ ಸಾಹಿತ್ಯ'ದಲ್ಲಿ ಪ್ರಕಟಿಸಿದರು. ಯಾವೂರಿಗೆ ಹೋದರೂ ಶಾಸ್ತ್ರೀಜಿಯವರು ಹೊಸತು ತಂದೇ ತರುತ್ತಿದ್ದರು. 'ಶರಣಸಾಹಿತ್ಯ' ಪತ್ರಿಕೆ ಶಾಸ್ತ್ರೀಜಿಯವರ 'ಮುಖವಾಣಿ'ಯಾಗಿ ಮೆರೆಯಿತು.

''ಅರಮನೆಗಲ್ತು ಜನಮಗೆಗಲ್ತು ಗುರುಮನೆಗಲ್ತು ಕೂಡೆ ಬಲ್ಲರ ಬಗೆಗಲ್ತು ವಸ್ತು ಕೃತಿಯಂ ಸಲೆ ಪೇಳ್ವುದು ಕಲ್ತು ಪೇಳದಂದು ಅರಮನೆಗೆ ಅಲ್ತು ಜನಮನೆಗೆ ಅಲ್ತು ಗುರು ಮನೆಗೆ ಅಲ್ತು ಕೂಡೆ ಬಲ್ಲರ ಬಗೆಗೆ ಅಲ್ತು ಅದು ಆವೆಡೆಗಂ ಅಲ್ತು ಅದು ಕಲ್ತಿವಲಂ ಶಿವಶಾಸ್ತ್ರೀಗಳಾ'' ಎನ್ನಬಹುದು.

ಶಾಸ್ತ್ರೀಜಿಯವರಿಗೆ ಯಾವುದೇ ಖಚಿತವಾದ ಆದಾಯವಿರಲಿಲ್ಲ. ಹೀಗಾಗಿ ಅವರು ಆರ್ಥಿಕವಾಗಿ ಶ್ರೀಮಂತರಲ್ಲದಿದ್ದರೂ ಜನತೆಯನ್ನು ಒಲಿಸಿಕೊಂಡು ಅವರಿಂದ ಸಾಹಿತ್ಯ ಸೇವೆಗೆ ನೆರವು ಮಾಡುತ್ತಿದ್ದರು. ಅವರು ಅರ್ಥಕ್ಕೆ, ಕೀರ್ತಿಶ್ರೀಗೆ ಮಾರು ಹೋಗಲಿಲ್ಲ, ಪ್ರತಿಯಾಗಿ ಅರ್ಥವೇ ಪ್ರಯೋಗವಾಗಿ ಅವರನ್ನೇ ಹುಡುಕಿಕೊಂಡು ಬಂದವು.

ಇವರ ಅಪಾರ ಸೇವೆಯನ್ನು ಗಮನಿಸಿ ೧೯೩೬ರಲ್ಲಿ ಮೈಸೂರಿನ ಆಸ್ಥಾನವಿದ್ವಾಂಸರಾದರು. ಅರಮನೆಯಿಂದ 'ಪಂಡಿತರತ್ನ', ೧೯೬೬ರಲ್ಲಿ ಭಾರತ ಸರ್ಕಾರದಿಂದ 'ಪದ್ಮಶ್ರೀ' ಜನಮನೆಯಿಂದ 'ಕೀರ್ತನ ಕೇಸರಿ' ೧೯೭೫ರಲ್ಲಿ ಮೈಸೂರು ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಬಂದಿವೆ. ೧೯೬೮ರಲ್ಲಿ ಶಾಸ್ತ್ರೀಜಿಯವರ ಅಪಾರ ಶಿಷ್ಯವೃಂದ 'ದೇವಗಂಗೆ' ಎಂಬ ಅಭಿನಂದನ ಗ್ರಂಥವನ್ನು ಅರ್ಪಿಸಿತ್ತು.

ಡಾ. ಬಿ. ಶಿವಮೂರ್ತಿ ಶಾಸ್ತ್ರೀಜಿಯವರು ೧೫-೧-೧೯೭೬ರಂದು ಇಹಲೋಕ ವ್ಯಾಪಾರವನ್ನು ತ್ಯಜಿಸಿ ಶಿವನಲ್ಲಿ ಐಕ್ಯರಾದರು. ಅವರ ಲೇಖನಗಳು, ಗ್ರಂಥಗಳು ಅಪಾರವಾಗಿದೆ. ಅವು ಈ ಮುಂದಿನಂತಿವೆ.

೧. ವೀರಶೈವ ಸಾಹಿತ್ಯ ಮತ್ತು ಇತಿಹಾಸ ಭಾಗ, ೧, ೨, ೩, ೪, ಮತ್ತು ೫, ೨. ವೀರಶೈವ ಮಹಾಪುರುಷರು, ೩. ಕರ್ನಾಟಕ ಸಂದರ್ಶನ, ೪. ಶ್ರೀ ಮಾದೇಶ್ವರ ಚರಿತ್ರೆ, ೫. ಕೆಳದಿ ಚನ್ನಮ್ಮಾಜಿ, ೬. ಕನ್ನಡ ಕಲಿ ಸಿರುಮನ ಚರಿತ್ರೆ, ೬. ಅರುವತ್ಮೂರು ಪುರಾತನರು, ೭. ಶಿವಶರಣರ ಚರಿತ್ರೆ, ೭. ಬೀಳಿರಾಜರ ಚರಿತ್ರೆ, ೮. ಕೆಳದಿ ಅರಸು ಮನೆತನ ಮೊದಲಾದವುಗಳಲ್ಲದೆ. ಅಪರೂಪದ ಸಂಶೋಧನಾತ್ಮಕ ಲೇಖನಗಳು ಕೊಂಡುಗಳಿ ಕೇಶಿರಾಜ, ಅಮರಗೊಂಡ ಮಲ್ಲಿಕಾರ್ಜುನ, ಬಿಜ್ಜ ಮಹಾದೇವಿ, ಆಚಾರ್ಯ ರೇವಣಸಿದ್ಧ, ರುದ್ರಮುನಿ, ಏಕೋರಾಮ, ವೀರಶೈವ ಮಠಗಳು, ವಿಜಯನಗರ ಸಾಮ್ರಾಜ್ಯ ಮತ್ತು ವೀರಶೈವ, ತೊಟ್ಟಲಿಗೆರೆ ಶಾಸನ, ಶ್ರೀನಾಥ, ಹರಿಹರನ ರಗಳೆ, ಕೊಡಗಿನ ಚರಿತ್ರೆ, ಚಾಮುಂಡರಾಯ, ಕೆಲವು ವಚನಕಾರರ ಅಂಕಿತ, ತೋಂಟದ ಸಿದ್ಧಲಿಂಗ, ಸಿರಸಿಂಗಿಯ ಲಿಂಗರಾಜರು, ಶರಣ ಬಸವೇಶ್ವರರ ಚರಿತ್ರೆ, ಸಪ್ತ ಕಾವ್ಯದ ಗುರುಬಸವ, ಶೃಂಗೇರಿ ಮಠದಲ್ಲಿ ರೇವಣಸಿದ್ಧ, ಶಿವಶರಣರ ಸ್ತೋತ್ರಗಳು, ಹೀಗೆ ನೂರರನ್ನು ಉದಾಹರಿಸಬಹುದು.

ಶಾಸ್ತ್ರೀಜಿಯವರಿಗೆ ಇಬ್ಬರು ಗಂಡು ಮಕ್ಕಳು. ಶ್ರೀ ಎಚ್.ಎಸ್. ರೇಣುಕಾಪ್ರಸಾದ್ ಹಿರಿಯಮಗ. ಇವರ ಕುಟುಂಬ. ಶ್ರೀಮತಿ ಲೀಲಾದೇವಿ ಆರ್. ಪ್ರಸಾದ್, ದಂಪತಿಗಳಿಬ್ಬರೂ ಕೀರ್ತಿವಂತರು. ಪ್ರೊ. ಎಚ್.ಎಸ್. ಶಿವಪ್ರಸಾದ್, ಕಿರಿಯ ಮಗ, ಪ್ರಾಧ್ಯಾಪಕರು, ನಾಟಕಕಾರರು ಮತ್ತು ವಿಮರ್ಶಕರು, ಅಪಾರ ಮೊಮ್ಮಕ್ಕಳಿದ್ದಾರೆ.

''ಕೆಲವರ ಬಲ್ಲವರಿಂದ ಕಲ್ತು, ಕೆಲವಂ ಶಾಸ್ತ್ರಂಗಳು ಕೇಳುತ್ತಂ, ಕೆಲವಂ ಮಾಳ್ಪವರಿಂದ ಕಂಡು, ಕೆಲವಂ ಸುಜ್ಞಾನದಿಂ ನೋಡುತಂ, ಕೆಲವಂ ಸಜ್ಜನ ಸಂಗದಿಂದ ಅರಿಯಲ್ ನರಂ ಸರ್ವನಪ್ಪಮ ಪಲವು ಪಳ್ಳ ಸಮುದ್ರಮೈ'' ಎಂಬ ಪುಲಿಗೆರೆ ಸೋಮೇಶ್ವರನ ಶತಕದ ಈ ಮಾತು ಪದ್ಮಶ್ರೀ ಡಾ. ಬಿ. ಶಿವಮೂರ್ತಿ ಶಾಸ್ತ್ರೀಜಿ ಅವರಿಗೆ ಸಂಪೂರ್ಣವಾಗಿ ಅನ್ವಯವಾಗುತ್ತಿದೆ. ಇಂತಹ ಅದ್ಭುತ ಪ್ರತಿಭಾವಂತ ಆಸ್ಥಾನ ವಿದ್ವಾಂಸರನ್ನು ಸ್ಮರಿಸುವುದೇ ಪುಣ್ಯಕಾರಕವಾದುದು. ೨೩.೨.೨೦೦೩ಕ್ಕೆ ಅವರಿಗೆ ಒಂದು ಶತಮಾನ. ಈ ಶತಮಾನದ ಮರೆಯಲಾಗದ, ಮರೆಯಬಾರದ ವ್ಯಕ್ತಿ ಶಾಸ್ತ್ರೀಜಿಯವರು.

*

## ಶ್ರೀವಾಣಿ

ನಮ್ಮ ಸಂಸ್ಕೃತಿಯ ದಿವ್ಯ ಬೆಳಕಿಗೆ ಅನೀತಿಯ, ಭ್ರಷ್ಟಾಚಾರದ ಕವಚವನ್ನ ತೊಡಿಸಿದ್ದಾರೆ. ಅದನ್ನು ಕಿತ್ತು ಹಾಕಿದರೆ ಮಾನವೀಯತೆಯ ಬಂಗಾರ ಅರಳುತ್ತದೆ. ಜಗತ್ತಿನ ಕಣ್ಣು ತೆರೆಯುತ್ತದೆ.

## ಆಧುನಿಕ ವಚನಗಳು

### ಚಿಂತೆ

ಚಿಂತೆ ಮಾಡಬೇಕು ಕಾಲ ಸದುಪಯೋಗ ಮಾಡಲಿಲ್ಲವೆಂದು
ಚಿಂತೆ ಮಾಡಬೇಕು ದೇವರ ಪೂಜೆ ಮಾಡಲಿಲ್ಲವೆಂದು
ಚಿಂತೆ ಮಾಡಬೇಕು ದೇಹ ದಂಡಿಸಿ ಕಾಯಕವ ಮಾಡಲಿಲ್ಲವೆಂದು
ಚಿಂತೆ ಮಾಡಬೇಕು ಅತಿಥಿ ಸತ್ಕಾರ ಮಾಡಲಿಲ್ಲವೆಂದು
ಚಿಂತೆ ಮಾಡಬೇಕು ಅನ್ಯರ ಕಷ್ಟದಲ್ಲಿ ಭಾಗಿಯಾಗಲಿಲ್ಲವೆಂದು
ಚಿಂತೆ ಮಾಡಬೇಕು ಉಪಕಾರ ಸ್ಮರಣೆ ಮಾಡಲಿಲ್ಲವೆಂದು
ಇಂತೀ ಚಿಂತೆಗಳ ಚಿತೆಯಲ್ಲಿ ಬೆಂದಿಹೆನಯ್ಯ
ಹರಳೂರು ವೀರಭದ್ರ ಪ್ರಭುವೇ

### ನಡೆ-ನುಡಿ

ನುಡಿದಂತೆ ನಡೆಯಬೇಕಲ್ಲದೆ ನಡೆಯದಲೆ ನುಡಿಯಬಾರದಯ್ಯಾ
ನಡೆ ನುಡಿಯಲಿ ಸಾಮ್ಯತೆ ಇರಬೇಕಲ್ಲದೆ ಕಂದಕವಿರಬಾರದಯ್ಯಾ
ನಡೆ ನುಡಿ ಹಾಲು ಜೇನಿನಂತೆ ಇರಬೇಕಲ್ಲದೆ
ನೀರಿಗೆ ಹಾಲು ಬೆರೆತಂತೆ ಇರಬಾರದಯ್ಯಾ
ನಡೆ ನುಡಿಯಲ್ಲಿ ಪರಿಮಳ ತುಂಬಿರಬೇಕಲ್ಲದೆ
ದುರ್ಗಂಧವಿರಬಾರದಯ್ಯಾ
ನಡೆ ವೀಣೆ, ನುಡಿ ತಂತಿಯಾದರೆ ಜೀವನ ಸೊಗಸು
ಹರಳೂರು ವೀರಭದ್ರ ಪ್ರಭುವೆ

### ಮನಸ್ಸು

ಅಂತರಂಗ ಶುದ್ಧಿಯಿಲ್ಲದೆ ಬಹಿರಂಗಕೆ ಶೋಭೆ ಬಾರದಯ್ಯಾ
ಒಳಗೆ ಕೆಸರ ತುಂಬಿ ಹೊರಗೆ ಶ್ರೀಗಂಧವ ಲೇಪಿಸಿದರೆ
ಮನದೊಳಗಿನ ಕೆಸರು ತಿಳಿಯಾಗುವುದೇ ಅಯ್ಯಾ
ಮನಸು ಸ್ಫಟಿಕದಂತೆ ಇರಬೇಕಲ್ಲದೆ
ಮಂಜು ಮುಸುಕಿದ ಕನ್ನಡಿಯಾಗಬಾರದಯ್ಯಾ
ಮನಸೆಂಬ ಬೆಳ್ಳಿಯ ತೆರೆಯ ಮೇಲೆ
ಶುದ್ಧ ಚಿಂತನೆಗಳ ಮೂಡಿಸಬೇಕಲ್ಲದೆ
ಅನೀತಿ, ಅಧರ್ಮ, ಅವ್ಯವಹಾರಗಳ ಮೂಡಿಸಿದರೆ
ಬದುಕಿಗೆ ಸಹಜತೆ ಬಾರದು ಅಯ್ಯಾ
ಮನಸು ಮಾನಸ ಸರೋವರವಾದರೆ ಬದುಕೆಲ್ಲ
ನಿತ್ಯ ಬೆಳದಿಂಗಳು ನೋಡಾ ಹರಳೂರು ವೀರಭದ್ರ ಪ್ರಭುವೆ

— ಎಚ್.ಎಸ್. ಸಿದ್ಧಗಂಗಪ್ಪ

# ಶಸ್ತ್ರ ಚಿಕಿತ್ಸೆಯ ವೈದ್ಯಭಾಸ್ಕರ ಡಾ. ಕೆ.ಟಿ. ಸುರೇಂದ್ರ

*ಪರಮಪೂಜ್ಯ ಶ್ರೀಮನ್ನಿರಂಜನ ಪ್ರಣವ ಸ್ವರೂಪಿ, ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜನ್ಮದಿನವನ್ನು ಗುರುವಂದನ ಸಮಾರಂಭವಾಗಿ ಸಡಗರ ಸಂಭ್ರಮ ಹಾಗೂ ಅರ್ಥಪೂರ್ಣವಾಗಿ ಆಚರಿಸುವ ದೃಷ್ಟಿಯಿಂದ ಪ್ರತಿವರ್ಷ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಅನುಪಮ ಸೇವೆ ಸಲ್ಲಿಸಿದ ಗಣ್ಯರನ್ನು ಗೌರವಿಸುವ ಸಂಪ್ರದಾಯವನ್ನು ಹಮ್ಮಿಕೊಂಡು ನಡೆಸಿಕೊಂಡು ಬರಲಾಗುತ್ತಿದೆ. ಅದರಂತೆ ೯೬ನೇ ಗುರುವಂದನ ಸಮಾರಂಭದಲ್ಲಿ ಶ್ರೀ ಮತ್ತೂರು ಕೃಷ್ಣಮೂರ್ತಿ, ಶ್ರೀ ವಿಜಯ ಸಂಕೇಶ್ವರ, ಡಾ. ಕೆ.ಟಿ. ಸುರೇಂದ್ರ, ಶ್ರೀ ಡಿ.ಕೆ. ಆದಿಕೇಶವುಲು ಹಾಗೂ ಶ್ರೀ ಕಸ್ತೂರಿ ರಮೇಶ್ ಪೈ ಅವರಿಗೆ ಪರಮಪೂಜ್ಯ ಶ್ರೀ ಶ್ರೀಗಳವರು ಶಾಲುಹೊದಿಸಿ ಫಲತಾಂಬೂಲ, ನೆನಪಿನ ಕಾಣಿಕೆ ನೀಡಿ ಆಶೀರ್ವದಿಸಿದರು. ವೈದ್ಯಕೀಯ ಕ್ಷೇತ್ರದಲ್ಲಿ ಅನುಪಮ ಸೇವೆ ಸಲ್ಲಿಸಿದ ಡಾ. ಕೆ.ಟಿ. ಸುರೇಂದ್ರ ಅವರ ಪರಿಚಯವನ್ನು ಪ್ರಸ್ತುತ ಸಂಚಿಕೆಯಲ್ಲಿ ಮಾಡಿಕೊಡಲಾಗಿದೆ.*

ರಮ್ಯ ಮಣೀಯ, ಪ್ರಶಾಂತ ಪ್ರಕೃತಿಯ, ಮಡಿಲೆನಿಸಿದ ತೀರ್ಥಹಳ್ಳಿಯ ಬಳಿ ಕಡಿದಾಳ್ ಎಂಬಲ್ಲಿ ಡಾ. ಸುರೇಂದ್ರ ಅವರು 'ತಮ್ಮಯ್ಯ-ಕಮಲಮ್ಮ' ದಂಪತಿಗಳಿಗೆ ೧೯೩೯ನೇ ಇಸವಿ ಸೆಪ್ಟೆಂಬರ್ ತಿಂಗಳು ೨೬ರಂದು ಜೇಷ್ಠ ಪುತ್ರರಾಗಿ ಜನಿಸಿದರು. ಪ್ರಾರಂಭಿಕ ಹಿನ್ನೆಲೆ, ಪರಿಸರವನ್ನು ಗಮನಿಸಿದ್ದ ಯಾರಿಗೂ ಡಾ. ಸುರೇಂದ್ರ ಅವರು ವರ್ಷಗಳು ಸರಿದಂತೆಲ್ಲಾ, ಕಾಲದೇಶಗಳು ಬದಲಾಗಿ ತಿರುವು ನಿಲುವು ಗಳು ಮಾರ್ಪಾಡಾದಂತೆಲ್ಲಾ ಅವರ ಭವಿಷ್ಯದ ಪಯಣ ಉತ್ತಮ ಶಿಖರದತ್ತ ಸಾಗಬಹುದೇ ಎಂದು ಪೂರ್ವಭಾವಿ ಯಾಗಿ ಕಲ್ಪಿಸಿಕೊಂಡು ಚಿತ್ರಿಸಿಕೊಳ್ಳಲು ಸಾಧ್ಯವಿರಲಿಲ್ಲ. ಅಂತಹ ದಿಕ್ಕುದಿಶೆಗಳತ್ತ ದಿಟ್ಟ ಚಲನೆಗಳ ಕಡೆಗೆ ಊರ್ಧ್ವಗಾಮಿಯಾಗಿ ಬೆಳೆದ, ಶ್ರೇಷ್ಠ ಮೂಳೆ ತಜ್ಞ ಡಾ. ಕೆ.ಟಿ. ಸುರೇಂದ್ರ ಅವರು.

## ಬಾಲ್ಯದ ದಿನಗಳು ಮತ್ತು ವಿದ್ಯಾಭ್ಯಾಸ

ಡಾ. ಸುರೇಂದ್ರರ ಪ್ರಾರಂಭಿಕ ವಿದ್ಯಾಭ್ಯಾಸ ಕಡಿದಾಳ್ ಬಳಿ ಇರುವ ಹಾರೋಗೊಳಿಗೆಯ ಪ್ರಾಥಮಿಕ ಶಾಲೆಯಲ್ಲಿ ಶುರುವಾಯಿತು. ಆದಾದನಂತರ ಶಿವಮೊಗ್ಗದಲ್ಲಿ ಕೆಲವು ವರ್ಷಗಳು, ತರುವಾಯ ಬೆಂಗಳೂರಿಗೆ ಪಯಣ. ಪ್ರೌಢ ಹಾಗೂ ಕಾಲೇಜು ವ್ಯಾಸಂಗ ಮುಂದುವರಿಸಲು ಮಾಜಿ ಮುಖ್ಯಮಂತ್ರಿಗಳಾದ ಕಡಿದಾಳ್ ಮಂಜಪ್ಪನವರ ಮನೆಯಲ್ಲೇ ವಾಸ್ತವ್ಯ ಸುಮಾರು ಎಂಟು ಹತ್ತು ವರ್ಷಗಳ ಕಾಲ.

ತಮ್ಮಯ್ಯನವರಿಗೆ ಮಗ ಸಾಮಾನ್ಯ ಪದವೀಧರನಾಗುವುದರಲ್ಲಿ ಅಷ್ಟು ಆಸಕ್ತಿ ಇರಲಿಲ್ಲ. ಏನೇ ಆಗಲಿ, ವೈದ್ಯಕೀಯ ಶಿಕ್ಷಣ ಕೊಡಿಸಲೇಬೇಕೆಂಬ ತೀವ್ರ ಬಯಕೆ. ಅಂತಹ ಒಂದು ಉದ್ದೇಶವನ್ನು ಸಫಲಗೊಳಿಸಲು, ಯವ್ವನದ ಹೊಸ್ತಿಲಿನಲ್ಲಿದ್ದ ಸುರೇಂದ್ರ ಅವರಿಗೂ ಅದೇ ಚಿಂತನ ಮಂಥನ ಆಳವಾಗಿ ಬೇರೂರಿ, ಸದವಕಾಶಕ್ಕಾಗಿ ಹಾತೊರೆಯುತ್ತಿತ್ತು. ಅದೃಷ್ಟವಶಾತ್, ಅವರು ಮಣಿಪಾಲಿನ ಕಸ್ತೂರಿ ಬಾ ಮೆಡಿಕಲ್ ಕಾಲೇಜಿಗೆ ಸೇರಿಕೊಳ್ಳಲು ತಂದೆಯವರು ಅನುಕೂಲ ಮಾಡಿಕೊಟ್ಟು ಪ್ರೋತ್ಸಾಹಿಸಿ ಮಗನನ್ನು ಹರಸಿ, ಕಳುಹಿಸಿಕೊಟ್ಟರು – ಮಂಗಳೂರಿನಲ್ಲೂ ವೈದ್ಯಕೀಯ ಶಿಕ್ಷಣ ಮುಂದುವರಿದು ೧೯೬೨ ರಲ್ಲಿ ಎಂ.ಬಿ.ಬಿ.ಎಸ್. ಪದವಿಯನ್ನು ಉತ್ತಮ ದರ್ಜೆಯಲ್ಲಿ ಪಡೆದರು. ತರುವಾಯ ೧೯೬೮ರಲ್ಲಿ 'ಅನಾಟಮಿ' ವಿಭಾಗದಲ್ಲಿ ಉಪನ್ಯಾಸಕರಾಗಿ ಕೆಲಸ ಮಾಡಿದರು. ಆ ಸಮಯದಲ್ಲೇ ಡಾ. ಸುರೇಂದ್ರ ಅವರಲ್ಲಿ ಉನ್ನತ ಅಧ್ಯಯನದ ದಾಹ, ತನ್ನ ಪರಾಕಾಷ್ಠತೆಯನ್ನು ಮುಟ್ಟಿದ ಅಮೃತಘಳಿಗೆ.





ತಾನು ಗಳಿಸಿರುವ ವಿದ್ಯಾರ್ಹತೆ, ಸಾಮಾನ್ಯ ಜೀವನ ಮತ್ತು ಹೊಟ್ಟೆಪಾಡಿಗೆ ಮಾತ್ರ ಸಾಕು. ಕೇವಲ ಅಷ್ಟೇ ಆದರೆ, ಅದು ಯಾವ ಪುರುಷಾರ್ಥಕ್ಕೆ ? ಒಳಗೊಳಗೇ ಆಂತರಿಕ ಜಿಜ್ಞಾಸೆ ! ಬದುಕಿನಲ್ಲಿ ಒಂದು ಭವ್ಯ ಆದರ್ಶ ಅಗತ್ಯ ಬೇಕು ಅದನ್ನು ಸಾಧಿಸಲು ಸರಿಯಾದ ಮಾರ್ಗ, ನಿಚ್ಚಳ ಶ್ರದ್ಧೆ ಅವಿಶ್ರಾಂತ ಜ್ಞಾನಾರ್ಜನೆ ಹಾಗೂ ಪ್ರಗತಿಪರವಾದ ಕಲಿಕೆಯ ಪರಿಸರ-ಶಿಕ್ಷಣ ಸಂಸ್ಥೆಗಳು ಮತ್ತು ಆಸ್ಪತ್ರೆಗಳು, ಡಾ. ಸುರೇಂದ್ರರವರ ಅನುದಿನದ ಗಾಢಾಲೋಚನೆ, ಕ್ರಿಯಾಶೀಲತೆ ಇಂಗ್ಲೆಂಡ್ ಕಡೆ ಅಡೆತಡೆಯಿಲ್ಲದೆ ಹರಿಯ ತೊಡಗಿತು. ಚಿತ್ ಶಕ್ತಿ ಪ್ರಖರಗೊಂಡರೆ ಬಾಹ್ಯ ಪ್ರಪಂಚದ ಹಾದಿ ಸುಗಮಗೊಳ್ಳುತ್ತದೆ. ಶುದ್ಧ ಹೃದಯದಿಂದ ಚಿಮ್ಮುವ ಹಂಬಲ ಹೊಂಗಿರಣವಾಗಿ ದಾರಿ ದೀಪವಾಗುತ್ತದೆ. ಡಾ. ಸುರೇಂದ್ರರ ಇಚ್ಛೆಗೆ ಇಂಬು ಸಿಗುವ ಕಾಲ ಪಕ್ವವಾಯಿತು.

## ದೈವ ನಿರ್ದೇಶಿಸಿದ ದಾರಿ

ಪೂರ್ವನಿಶ್ಚಿತ, ದೈವಾನುಗ್ರಹ ಬಲವೊಂದಿದ್ದರೆ ಹಿಮಾಲಯದಂತಹ ಸಾಹಸವೂ ಕೈಗೆ ಎಟುಕುವುದು. ಅಂತಹ ಶಕ್ತಿ ಪ್ರೇರಣೆ ಡಾ. ಸುರೇಂದ್ರ ಅವರ ಬಾಳ್ವೆಯಲ್ಲಿ ಪರೋಕ್ಷವಾಗಿ ನಿರ್ವಹಿಸಿದೆ. ಕನಸು ಮನಸಿನಲ್ಲೂ ಎಣಿಸಿಕೊಳ್ಳಲಾಗದಂತಹ ಸದೃಶ ಕಾರ್ಯಗಳು ಜರುಗಿವೆ. ಯಾರೊಬ್ಬರ ಕೃಪಾಕಟಾಕ್ಷ, ನೆರವು ಬೆಂಬಲ, ಶಿಫಾರಸುಗಳನ್ನು ಆಶ್ರಯಿಸಿಕೊಂಡು ಡಾ. ಸುರೇಂದ್ರ ಮೇಲೇರಿ ಕೃತಕೃತ್ಯರಾದವರಲ್ಲ. ಅಗೋಚರ ದೈವ ಪ್ರೇರಣೆ ದಾರಿಯುದ್ದಕ್ಕೂ ಕ್ರಿಯಾಶೀಲವಾಗಿ ಆವಿಷ್ಕಾರ ಗೊಂಡಿದೆ. ಎಂತಹ ಪ್ರಕ್ಷುಬ್ಧ ಸಮಯಗಳಾಗಿರಲಿ, ಮಾನಸಿಕ ಕ್ಲೈಬ್ಯವೇ ಆವರಿಸಿರಲಿ ಅಂತಹ ಶಕ್ತಿಯೇ ಅವರನ್ನು ಕೈ ಹಿಡಿದು ನಡೆಸಿ, ದಾರಿ ತೋರಿಸಿ, ಮಾರ್ಗದರ್ಶನವನ್ನಿತ್ತಿದೆ.

ಅಂದಿನ ದಿನಗಳಲ್ಲಿ ಸುಮಾರು ೧೯೬೮-೬೯ರಲ್ಲಿ ವಿದೇಶ ವ್ಯಾಸಂಗ, ಅಧ್ಯಯನ ಎಲ್ಲರ ಪಾಲಿಗೂ ಲಭ್ಯವಾಗುವಂತಹ ಸುಲಭ ಸಂಗತಿಯಾಗಿರಲಿಲ್ಲ. ಅದರಲ್ಲೂ ಜ್ಞಾನಾರ್ಜನೆಗೆ ವಿಖ್ಯಾತವೆನಿಸಿದ ಇಂಗ್ಲೆಂಡ್‌ನ ಪ್ರತಿಷ್ಠಿತ ಶೈಕ್ಷಣಿಕ ಸಂಘ ಸಂಸ್ಥೆಗಳಲ್ಲಿ ಸ್ವಂತಿಕೆ, ಶಕ್ತಿ ಸಾಮರ್ಥ್ಯ, ಆತ್ಮವಿಶ್ವಾಸದಿಂದ ಪ್ರಯತ್ನಿಸಿದ ಡಾ. ಸುರೇಂದ್ರರ ಅಭೀಪ್ಸೆ ಫಲಪ್ರದಾಯಿತು: ಅದೊಂದು ಸುದೀರ್ಘ ಕಾಲದ ವೃತ್ತಿ ವಿಜ್ಞಾನ ಪರಿಣತ, ತಾಂತ್ರಿಕ ಚಾಕಚಕ್ಯತೆಯ ತಜ್ಞತೆ, ಅನುಭವ ದರ್ಶನ, ವಿಸ್ಮಯ ಪೂರ್ಣ ಶಸ್ತ್ರಚಿಕಿತ್ಸೆಯ ಪರಿಶ್ರಮಗಳು.

ರಾಯಲ್ ಕಾಲೇಜ್ ಆಫ್ ಸರ್ಜನ್ಸ್ ಅಲ್ಲಿ ಡಾ. ಸುರೇಂದ್ರ ಅವರು 'ಜನರಲ್ ಸರ್ಜರಿ'ಯಲ್ಲಿ ನಿಷ್ಣಾತರಾಗಿ ಎಫ್.ಆರ್.ಸಿ.ಎಸ್. ಮಾನ್ಯತೆಯನ್ನು ಗಳಿಸಿಕೊಂಡರು, ಅಷ್ಟಕ್ಕೇ ತೃಪ್ತರಾಗದೆ ಮತ್ತೊಂದು ಎಫ್.ಆರ್.ಸಿ.ಎಸ್. ಪದವಿಯನ್ನು 'ಆರ್ಥೋಪೆಡಿಕ್ಸ್ ವೈದ್ಯವಿಜ್ಞಾನದಲ್ಲಿ' ಸಂಪಾದಿಸಿದರು. ಅಂದರೆ, ಒಂದಲ್ಲ-ಎರಡು ಎಫ್.ಆರ್.ಸಿ.ಎಸ್.ಗಳು ಎಡಿನ್‌ಬರ್ಗ್‌ನಲ್ಲಿ, ಡಾ. ಸುರೇಂದ್ರ ಅವರ ಆಳವಾದ ಅಧ್ಯಯನ ಪಿಪಾಸೆ ಅಷ್ಟಕ್ಕೇನಿಲ್ಲದೆ, ಲಿವರ್‌ಪೂಲ್‌ನಲ್ಲಿ ಮೂಳೆಶಾಸ್ತ್ರ ವಿಜ್ಞಾನದ ಸ್ನಾತಕೋತ್ತರ ಪದವಿಯನ್ನು ಸಹ ತಮ್ಮದಾಗಿಸಿಕೊಂಡರು. ಹಾಗೆ ಅರ್ಜಿಸಿಕೊಂಡವರ ಆರು ಜಾಗತಿಕ ತಜ್ಞರ ಪೈಕಿ ಡಾ. ಸುರೇಂದ್ರರೂ ಒಬ್ಬರು.

## ನೋವು ನಿವಾರಕ ನಿಷ್ಣಾತ

ಡಾ. ಸುರೇಂದ್ರ ಅವರದು ಸಿದ್ಧ ಹಸ್ತ; ಮೂಳೆ ರೋಗ ರುಜಿನಗಳ ಚಿಕಿತ್ಸೆ ನೀಡುವುದರಲ್ಲಿ ಅಪರಿಮಿತ ಅನುಭವ, ಔಷಧೋಪಚಾರ, ಕ್ರಮ ವಿಧಾನಗಳಲ್ಲಿ ನಿಪುಣರು. ಅನುಸರಿಸುವ ಮಾರ್ಗ ಆಧುನಿಕ ರೀತಿಯದು. ಹಂತ ಹಂತವಾಗಿ ಕೂಲಂಕಷವಾಗಿ ರೋಗಿಗಳನ್ನು ಪರೀಕ್ಷಿಸಿ, ಪರಿಹಾರವನ್ನು ಒದಗಿಸಿ, ಆರೋಗ್ಯವರ್ಧಿನಿ ಕಾರ್ಯದಲ್ಲಿ ಮಗ್ನರಾಗುವಂತಹವರು. ಕಷ್ಟ ಸಂಕಷ್ಟಗಳಿಗೆ ಗುರಿಯಾಗಿರು ವವರ ಬಗ್ಗೆ ಸ್ಪಂದಿಸುವ ಅವರ ಅನುಕಂಪ ಅಸದೃಶವೇ ಸರಿ. ಅಸಹನೀಯ ಬಾಧೆ, ಯಾತನೆಯಲ್ಲಿ ಸಿಲುಕಿರುವವರಿಗೆ ಸಾಂತ್ವನ-ಅನಂತರ ಚಿಕಿತ್ಸೆ. ಜೊತೆಜೊತೆಗೆ ವೈದ್ಯಕೀಯ ಕ್ರಮವಿಧಾನ, ತಾಂತ್ರಿಕ ನೈಪುಣ್ಯತೆ ನೆರವಾಗುತ್ತವೆ. ಇವರು ಜಾಗತಿಕ ಕ್ಷೇತ್ರದಲ್ಲಿ ವಿಜೃಂಭಿಸುವ ಅತಿ ಶ್ರೇಷ್ಠ ಶ್ರೇಣಿಯ, ಆರು ಮೂಳೆ ಚಿಕಿತ್ಸೆ ತಜ್ಞರಲ್ಲಿ ಒಬ್ಬ ಪ್ರಮುಖರೆನಿಸಿದ್ದರೂ ಸಹ ನಿಗರ್ವಿ, ಅಷ್ಟು ಮಾತ್ರವಲ್ಲ ವಿನಯಸಂಪನ್ನರು.

## ಆಹ್ವಾನಿತ ಹುದ್ದೆಗಳು

ಹುದ್ದೆಗಳು ಡಾ. ಸುರೇಂದ್ರರನ್ನು ತಾವಾಗಿಯೇ ಹುಡುಕಿಕೊಂಡು ಬಂದವು. ಸುಮಾರು ಹತ್ತು ವರ್ಷಗಳ ಕಾಲ ಅವರು ಪ್ರಪ್ರಥಮ ವರ್ಗಕ್ಕೆ ಸೇರಿದ ಇಂಗ್ಲೆಂಡ್‌ನ ಆಸ್ಪತ್ರೆಗಳು ಮತ್ತು ಇನ್‌ಫರ್ಮರಿಗಳಲ್ಲಿ ತಮ್ಮ ಅನುಭವಗಳ ವ್ಯಾಪ್ತಿ ವಿಸ್ತಾರಗಳನ್ನು ವೈಯಕ್ತಿಕವಾಗಿ ಸಂದರ್ಶಿಸಿ, ಅತ್ಯಮೂಲ್ಯವಾದ ವೃತ್ತಿಪರ ತೀಕ್ಷ್ಣತೆ, ಮತ್ತು ಪರಿಪಕ್ವತೆಗಳನ್ನು ತಮ್ಮದಾಗಿಸಿಕೊಂಡರು. ಯಾವುದೇ ಶೈಕ್ಷಣಿಕ ಕ್ಷೇತ್ರದಲ್ಲಿ ಅಂತಿಮ ಗುರಿ ಎಂದರೆ ವಿಷಯ ವಿಚಾರಗಳ ಬಗ್ಗೆ ಪ್ರಬುದ್ಧತೆ; ವೃತ್ತಿಪರ ಅಭ್ಯಾಸವಾದರೆ, ಆಳಿನ

ರಾಳ, ರೀತಿ ನೀತಿಗಳ ಅಂತರ, ತಾರತಮ್ಯ ಹಾಗೂ ನಿರ್ಣಯಾತ್ಮಕ ಅಂತರ್ ಜ್ಞಾನ ಮತ್ತು ಪ್ರಯೋಗ.

ಈ ದಿಕ್ಕಿನಲ್ಲಿ ಪ್ರಾಯೋಗಿಕ ಅನ್ವೇಷಣೆ ಮತ್ತು ಆಳವಡಿಕೆಯಲ್ಲಿ ಡಾ. ಸುರೇಂದ್ರರಿಗೆ ಸಮೃದ್ಧವಾದ ದಾಖಲೆಯ ಸಾಮಗ್ರಿ ಎಂದರೆ, ಅವರು ಕಾರ್ಯನಿರತರಾಗಿ ಸೇವೆ ಸಲ್ಲಿಸಿದ ಬ್ರಿಟಿಷ್ ದ್ವೀಪಗಳಲ್ಲಿನ ವಿಶ್ವವಿಖ್ಯಾತ ಇನ್‌ಫರ್ ಮರಿಗಳು ಹಾಗೂ ಚಿಕಿತ್ಸಾಲಯಗಳು; ಒಂದಕ್ಕಿಂತ ಮತ್ತೊಂದು ವಿಭಿನ್ನ; ಒಂದು ನಿರ್ದಿಷ್ಟವಾಗಿ ಯಾವುದಾದ ರೊಂದು ಮೂಳೆ ರೋಗಗಳ ಸಮೀಕ್ಷೆಯಲ್ಲಿ ವಿಶಿಷ್ಟವೆನಿಸಿದರೆ; ಮತ್ತೊಂದು, ನೂತನ ಮಜಲಿನಲ್ಲಿ ಕಣ್ತೆರೆಸುವ ವಿಭಾಗ. ಹೀಗೆ ಒಂದು ಮತ್ತೊಂದಕ್ಕೆ ಪೂರಕವಾಗಿ ಡಾ. ಸುರೇಂದ್ರ ಅವರಿಗೆ ಮೂಳೆ ರೋಗಗಳಲ್ಲಿ ಹುದುಗಿರುವ ವೈಚಿತ್ರ್ಯಗಳು, ಚಿಕಿತ್ಸೆಯ ಪರಿಕರಗಳು ಒಂದೆಡೆಯಾದರೆ, ಮತ್ತೊಂದು ದೃಷ್ಟಿಯಲ್ಲಿ ವಿವೇಚಿಸಿದಾಗ ವರ್ಗೀಯ ಸ್ವರೂಪ, ವಿನ್ಯಾಸ ವಕ್ರತೆ, ಅನುವಂಶೀಯ ಸಂಕೀರ್ಣತೆ, ವೃದ್ಧಾಪ್ಯದಲ್ಲಿ ತಗಲುವ ಮೂಳೆ ಬಾಧೆ, ರೋಗಗಳ ಮಾರ್ಪಾಟು, ಬದಲಾವಣೆ ಮತ್ತು ಕ್ಷೀಣಿಸುವ ಕ್ಷಯಗಳು, ಹೀಗೆ ನೂರಾರು ತರಹದ ಅಖಂಡತೆ.

ಇಲ್ಲಿ ಪ್ರಧಾನವಾಗಿ ಡಾ. ಸುರೇಂದ್ರ ಅವರು ಮೂಳೆ ತಜ್ಞರಾಗಿ ಸೇರಿಕೊಂಡು, ರೋಗಿಗಳಿಗೆ ಸಲ್ಲಿಸಿದ ಕೆಲವು ಆಸ್ಪತ್ರೆಗಳು ಮತ್ತು ಇನ್‌ಫರ್‌ಮರಿಗಳನ್ನು ಉಲ್ಲೇಖಿಸುವುದು ಸೂಕ್ತವೂ, ಅತ್ಯಂತ ಸಮಂಜಸವೂ ಆಗಿರುವಂತಹ ಮಹತ್ವದ ಸಂಗತಿ.

ಲಿವರ್‌ಪೂಲ್ ರಾಯಲ್ ಇನ್‌ಫರ್ಮರಿ, ಬ್ರಿಸ್ಟಲ್ ರಾಯಲ್ ಇನ್‌ಫರ್ಮರಿ, ವೆಸ್ಟ್ ವೇಲ್ಸ್ ಜನರಲ್ ಹಾಸ್ಪಿಟಲ್, ರಾಯಲ್ ಇನ್‌ಫರ್ಮರಿ, ವಾಲ್ಸ್, ಜನರಲ್ ಹಾಸ್ಪಿಟಲ್, ರಾಯಲ್ ಇನ್‌ಫರ್ಮರಿ (ಎಡಿನ್‌ಬರ್ಗ್), ವೆಸ್ಟ್ ಇನ್‌ಫರ್ಮರಿ (ಗ್ಲಾಸ್‌ಗೋ), ಬ್ಲ್ಯಾಕ್‌ಬರ್ನ್ ಇನ್‌ಫರ್ಮರಿ (ಬ್ಲ್ಯಾಕ್‌ಬರ್ನ್) ಹೀಗೆ ಇನ್ನೂ ಅನೇಕ ಹೆಸರಾಂತ ಬ್ರಿಟಿಷ್ ಕೇಂದ್ರಗಳು ಮತ್ತು ಅಂತರ ರಾಷ್ಟ್ರೀಯ ಭೂಪಟದಲ್ಲಿ ಶೋಭಿಸುವ ಆಸ್ಪತ್ರೆಗಳು.

ಡಾ. ಸುರೇಂದ್ರ ಅವರ ವೈದ್ಯಕೀಯ ಚಿಕಿತ್ಸೆಯ ಸಲಹೆ ಸೂಚನೆಗಳು, ವೈಜ್ಞಾನಿಕ ತಾಂತ್ರಿಕ ವಿಚಾರ ವಿನಿಮಯ, ಪಾರಿಭಾಷಿಕ ಸಂಶೋಧನೆ, ಜ್ಞಾನ ಪ್ರಸರಣ ಹಾಗೂ ವಿಸ್ತರಣೆ ಇತ್ಯಾದಿ ಫಲ ಪ್ರಯೋಜನಗಳು ನಮ್ಮ ರಾಜ್ಯಕ್ಕಷ್ಟೇ ಸೀಮಿತವಾಗಿಲ್ಲ. ಹಾಗೆಯೇ ಇವರನ್ನು ಅರಸಿಕೊಂಡು ದೂರದ ಸ್ಥಳಗಳಿಂದ ಬರುವ ರೋಗಿಗಳ ಸಂಖ್ಯೆಯೂ ಅಷ್ಟೆ. ರಾಜ್ಯ, ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟಗಳಲ್ಲೂ ಇವರ ಖ್ಯಾತಿ ಹಬ್ಬಿದೆ. ಚರ್ಚಾಗೋಷ್ಠಿಗಳಲ್ಲಿ, ಚಿಕಿತ್ಸೆಯ ಶಿಬಿರಗಳಲ್ಲಿ, ಕಮ್ಮಟಗಳಲ್ಲಿ ಸಂವಾದ ಸಮಾವೇಶಗಳಲ್ಲಿ, ಮೊದಲಾಗಿ ಡಾ. ಸುರೇಂದ್ರ ಅವರು ಇಂದಿಗೂ ಎಲ್ಲರ ಭಾಗಕ್ಕೂ ಅಮೂಲ್ಯ ನಿಧಿಯಾಗಿ, ಮೂಳೆ ವಿಜ್ಞಾನದ ಮುಂಚೂಣಿಯಲ್ಲಿದ್ದಾರೆ. ಅದಕ್ಕೆ ಅವರು ಮಂಡಿಸಿರುವ ವಿದ್ವತ್ಪೂರ್ಣ ಪ್ರಬಂಧಗಳು, ಕಾರ್ಯಾಗಾರಗಳಲ್ಲಿ ನೀಡಿರುವ ವ್ಯಾಖ್ಯಾನ ವಿಮರ್ಶೆಗಳು, ಜ್ವಲಂತ ಸಾಕ್ಷಿಗಳಾಗಿವೆ.

ದೇಶ ವಿದೇಶಗಳಲ್ಲಿ ಡಾ. ಸುರೇಂದ್ರ ಅವರು ವಿಶೇಷ ಜ್ಞಾನವನ್ನು ಸಂಪಾದಿಸಿರುವ ಕಾರಣ ಅನೇಕ ಸಂಘ ಸಂಸ್ಥೆಗಳಿಂದ ಗಳಿಕೆ ಬೇಡಿಕೆಗಳು ಎಡೆಬಿಡದೆ ಅವರನ್ನು ಹಿಂಬಾಲಿಸಿರುವುದೂ ಇಂದಿಗೂ ವಿಶೇಷ ಗೌರವವಾಗಿದೆ. ಉದಾಹರಣೆ ಎಂದರೆ, ವರ್ಷಂಪ್ರತಿ ಅವರು ವೇಲ್ಸ್‌ನಲ್ಲಿರುವ ಕಾರ್ಡಿಫ್ ಆಸ್ಪತ್ರೆಗೂ ಮತ್ತು ಆಸ್ಟ್ರೇಲಿಯಾದಲ್ಲಿನ ಸಿಡ್ನಿಯ ಆಸ್ಪತ್ರೆಗೂ ವಿಶೇಷ ಆಹ್ವಾನದ ಮೇರೆಗೆ 'ಆನ್ ಕಾಲ್' ಸರ್ವೀಸ್ ನೀಡಲು, ಒಂದೆರಡು ತಿಂಗಳುಗಳ ಕಾಲ, ಭೇಟಿ ನೀಡುವುದುಂಟು. ಇಂತಹ ಗುರುತರವಾದ ಜವಾಬ್ದಾರಿಯುಕ್ತ ಮಾನ್ಯತೆ ಅವರಿಗೆ ಅನೇಕ ವರ್ಷಗಳಿಂದ ಲಭ್ಯವಾಗಿರುವ ಸುಸಂದರ್ಭ. ನಮ್ಮೆಲ್ಲರ ಪಾಲಿಗೆ ಶ್ರೇಷ್ಠ ಸಮಕಾಲೀನರಾಗಿ, ಇಂತಹ ಉತ್ತಮೋತ್ತಮ ಸೇವೆ ಸಲ್ಲಿಸುತ್ತಿರುವ ಸುರೇಂದ್ರ ಅವರಿಗೆ ನಾಡಿನ ಜನತೆ ಎಷ್ಟು ಪ್ರೀತಿ, ವಿಶ್ವಾಸ ಕೃತಜ್ಞತೆಗಳನ್ನು ಸಲ್ಲಿಸಿದರೂ ಕಡಿಮೆಯೇ ಇಂತಹ ಅಸಾಧಾರಣ 'ಮೂಳೆ ವಿಜ್ಞಾನ ಚಿಕಿತ್ಸಕ ತಜ್ಞ'ರನ್ನು ಗುರುತಿಸಿ, ಸೂಕ್ತ ಸಿರಿ ಗೌರವ ಪುರಸ್ಕಾರಗಳನ್ನು ನೀಡುವುದು ಪರಮ ಪವಿತ್ರ ಆದ್ಯಕರ್ತವ್ಯವೆನಿಸುತ್ತದೆ.

ಅನನ್ಯ ಪ್ರತಿಭೆಯ, ಡಾ. ಕೆ.ಟಿ. ಸುರೇಂದ್ರ ಅವರ ವಿಶಿಷ್ಟ ಸೇವೆಯನ್ನು ಮನಗಂಡ ಶ್ರೀ ಸಿದ್ಧಗಂಗಾ ಮಠದ ಭಕ್ತಾದಿಗಳು, ಅಭಿಮಾನಿಗಳು ಮತ್ತು ಹಳೆಯ ವಿದ್ಯಾರ್ಥಿಗಳು ನಡೆದಾಡುವ ದೇವರೆಂದೇ ಪ್ರಸಿದ್ಧರಾಗಿರುವ ಮಹಾಸೇವಾ ತಪಸ್ವಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೯೬ನೇ ಜನ್ಮ ದಿನೋತ್ಸವ ಗುರುವಂದನ ಪವಿತ್ರ ಸಮಾರಂಭದಲ್ಲಿ ಶ್ರೀಯುತ ಸುರೇಂದ್ರರನ್ನು ''ಶಸ್ತ್ರ ಚಿಕಿತ್ಸೆಯ ವೈದ್ಯಭಾಸ್ಕರ''ನೆಂದು ಗೌರವಿಸಿ ಸನ್ಮಾನಿಸಲಾಯಿತು.

❀





# ಮಹಿಳಾ ಸಾಹಿತ್ಯ : ಒಂದು ಅವಲೋಕನ

– ಪ್ರೊ. ದಾಕ್ಷಾಯಣಮ್ಮ
ಕನ್ನಡ ಅಧ್ಯಾಪಕರು,
ಶ್ರೀ ಸಿದ್ಧಗಂಗಾ ಮಹಿಳಾ ಕಾಲೇಜು,
ತುಮಕೂರು.

''ಸಾಹಿತ್ಯ ಜೀವನದ ಪ್ರತಿಬಿಂಬ : ಸಾಹಿತ್ಯ ಜೀವನದ ಗತಿಬಿಂಬ''. ''ರಸಾನುಭವದ ಸುಂದರ ಅಭಿವ್ಯಕ್ತಿ ಸಾಹಿತ್ಯ''- ಈ ಎಲ್ಲ ಪ್ರಚಲಿತ ಅರ್ಥ ಮಹಿಳಾ ಸಾಹಿತ್ಯಕ್ಕೆ ಅನ್ವಯಿಸಲಾಗದೇಕೆ? ಮಸಾಲಾ ವಾಸನೆ, ಸಪ್ಪೆ – ಈ ಎಲ್ಲಾ ಪೂವಾಗ್ರಹ ಪೀಡಿತ ವಿಮರ್ಶೆಯ ಅಗತ್ಯವಿದೆಯೆ? ಯುಗವಾಣಿಯಾದ ಸಾಹಿತ್ಯದಲ್ಲಿ ಆಯಾ ಕಾಲದ ಸಂಸ್ಕೃತಿ, ಆಚಾರ-ವಿಚಾರ, ನಂಬಿಕೆಗಳು, ಆಲೋಚನೆ, ಚಿಂತನೆ – ಎಲ್ಲವೂ ಒಡಮೂಡಿರುತ್ತದೆ. ಸುಮಾರು ಒಂದೂವರೆ ಸಾವಿರ ವರ್ಷಕ್ಕೂ ಮಿಗಿಲಾದ ಕನ್ನಡ ಸಾಹಿತ್ಯ ಚರಿತ್ರೆ ತನ್ನೆಲ್ಲ ಅನನ್ಯತೆ ಹಾಗೂ ವಿಶಿಷ್ಟತೆಯಿಂದ ಸಮೃದ್ಧವಾಗಿ ಮೆರೆದಿದೆ. ಪುರುಷ ಶಾಹಿ ಸಾಹಿತ್ಯ ಎಷ್ಟೇ ಸ್ತ್ರೀಮಯವಾಗಿದ್ದರೂ, ಅದು ಮಹಿಳಾ ಸಾಹಿತ್ಯವಾಗಲಾರದು. ಸಾಮಾಜಿಕ, ಧಾರ್ಮಿಕ ಹಾಗೂ ರಾಜಕೀಯ – ಈ ಎಲ್ಲಾ ರಂಗಗಳಲ್ಲಿ ಆಗುವ ಬದಲಾವಣೆಗಳು, ಒತ್ತಡಗಳು, ಸಂಕೀರ್ಣತೆಗಳು, ಆಯಾ ಕಾಲದ ಸಾಹಿತ್ಯ ಸ್ವರೂಪ ನಿರ್ಧರಿಸುತ್ತವೆ. ಇಂತಹ ಸಾಹಿತ್ಯವನ್ನು ವ್ಯಾಖ್ಯಾನಿಸುವ ನೆಲೆಗಳೂ ಕೂಡ ಬದಲಾಗುತ್ತವೆ. ಚಾರಿತ್ರಿಕವಾಗಿ ಮತ್ತು ಪಾರಂಪರಿಕವಾಗಿ ಆಯಾ ಕಾಲದ ಒತ್ತಡಗಳಿಗೆ ಸಾಹಿತ್ಯವೂ ನಿರಂತರವಾಗಿ ಪ್ರತಿಕ್ರಿಯಿಸುತ್ತಲೇ ಬಂದಿದೆ. ಇಂತಹ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ನಾವು ಮಹಿಳಾ ಸಾಹಿತ್ಯವನ್ನು ಸಮೀಕ್ಷೆ ಮಾಡಬೇಕಾಗಿದೆ.

ಮಹಿಳಾ ಸಾಹಿತ್ಯದ ಸ್ವರೂಪವೇನು? ಆಯಾ ಕಾಲದ ಪ್ರಾತಿನಿಧಿಕ ಎನ್ನಬಹುದಾದ ಸಾಹಿತ್ಯ ಸೃಷ್ಟಿಯಾಗಿದೆಯೆ? ಮಹಿಳಾ ಸಾಹಿತ್ಯದಲ್ಲಿ ವ್ಯಕ್ತವಾಗಿರುವ ತಾತ್ವಿಕ ಚಿಂತನೆಗಳೇನು? ಅದರ ಮೌಲಿಕತೆಯೇನು? ಈ ದೃಷ್ಟಿಯಿಂದ ಮಹಿಳಾ ಸಾಹಿತ್ಯವನ್ನು ಅವಲೋಕಿಸುವ ಒಂದು ಕಿರು ಪ್ರಯತ್ನ ಮಾಡಲಾಗಿದೆ.

ಮೊದಲಿಗೆ ಸಾಹಿತ್ಯವನ್ನು ಪುರುಷ ಸಾಹಿತ್ಯ ಹಾಗೂ ಮಹಿಳಾ ಸಾಹಿತ್ಯ ಎಂದು ವಿಭಜಿಸಿ ನೋಡುವುದೇ ಅತ್ಯಂತ ಸುದೀರ್ಘ ವೈಜ್ಞಾನಿಕ ಇತಿಹಾಸವಿರುವ ಕನ್ನಡ ಸಾಹಿತ್ಯ ಪರಂಪರೆಗೆ ಲೇಖಕಿಯರ ಕೊಡುಗೆ ಗಮನಾರ್ಹವಾಗಿದೆ. ದರ್ಪ, ದೌರ್ಜನ್ಯಗಳ ಅಡಿಯಲ್ಲಿ ಅಭಿವ್ಯಕ್ತಿಯ ಅವಕಾಶಗಳೇ ಇಲ್ಲದೆ ಬದುಕಿದ ಮಹಿಳೆಯರು ಶತಶತಮಾನಗಳ ನಂತರ ಧ್ವನಿ ಪಡೆದದ್ದು ಐತಿಹಾಸಿಕ ಸತ್ಯ. ಮಹಿಳಾ ಸಾಹಿತ್ಯವನ್ನು ಅಧ್ಯಯನದ ದೃಷ್ಟಿಯಿಂದ ಎರಡು ವಿಭಾಗಗಳನ್ನಾಗಿ ನೋಡಬಹುದು.

೧. ಪ್ರಾಚೀನ ಮಹಿಳಾ ಸಾಹಿತ್ಯ
೨. ಆಧುನಿಕ ಮಹಿಳಾ ಸಾಹಿತ್ಯ

## *ಪ್ರಾಚೀನ ಮಹಿಳಾ ಸಾಹಿತ್ಯ*

ಕನ್ನಡ ಪ್ರಾಚೀನ ಸಾಹಿತ್ಯವನ್ನು ನಿಯಂತ್ರಿಸಿರುವ ಎರಡು ಮಹಾನ್ ಶಕ್ತಿಗಳು ಧರ್ಮ ಮತ್ತು ಪ್ರಭುತ್ವ, ಇವುಗಳ ಜೊತೆಗೆ ಕೈಗಾರೀಕರಣ, ಜಾಗತೀಕರಣ, ಉದಾರೀಕರಣ – ಈ ಎಲ್ಲ ಪ್ರಭಾವಗಳಿಗೊಳಗಾಗಿ ಆಧುನಿಕ ಸಾಹಿತ್ಯ ಮೂಡಿ ಬರುತ್ತಿದೆ. ಹನ್ನೆರಡನೆ ಶತಮಾನದ ನಂತರ ಮಹಿಳಾ ಸಾಹಿತ್ಯಕ್ಕೆ ಒಂದು ಅಸ್ತಿತ್ವ ಬಂತು. ಹನ್ನೆರಡನೆ ಶತಮಾನದಲ್ಲಿ ನಡೆದ ಸಾಮಾಜಿಕ ಹಾಗೂ ಧಾರ್ಮಿಕ ಆಂದೋಲನ, ಮಹಿಳೆಯರಿಗೆ ನೀಡಿದ ಅಭಿವ್ಯಕ್ತಿ ಸ್ವಾತಂತ್ರ್ಯ ಮಹಿಳಾ ಸಾಹಿತ್ಯಕ್ಕೆ ಒಂದು ನೆಲೆಯನ್ನು ಒದಗಿಸಿತು. ''ಹೆಣ್ಣು ಮಾರಿಯಲ್ಲ, ಮೋಹವಲ್ಲ, ಮಾಯೆಯಲ್ಲ, ಸಾಕ್ಷಾತ್ ಕಪಿಲಸಿದ್ಧ ಮಲ್ಲಿಕಾರ್ಜುನ'' ಎಂದು ಹೆಣ್ಣನ್ನು ಉನ್ನತನೆಲೆಗೇರಿಸಿದವರು ಶರಣರು. ವರ್ಗ, ವರ್ಣ, ಲಿಂಗಭೇದರಹಿತ ಸಮಾಜ ಕಟ್ಟುವ ಕನಸು ಕಂಡವರು ಶರಣರು. ಆಧ್ಯಾತ್ಮ ಸಾಧನೆಯಲ್ಲಿ ಸ್ತ್ರೀ-ಪುರುಷರಿಬ್ಬರೂ ಸಮಾನಾವಕಾಶ ಕಲ್ಪಿಸಿಕೊಟ್ಟ ಶರಣರು ನಿಜವಾದ ಅರ್ಥದಲ್ಲಿ ಪರಂಪರೆ ನಿರ್ಮಾಪಕರು. ಅಂದಿನ ಮಹಿಳೆಗೆ ಧಾರ್ಮಿಕ, ಆಧ್ಯಾತ್ಮಿಕ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಸ್ವಾತಂತ್ರ್ಯ, ಸೌಲಭ್ಯ ಪಡೆದ ಮಹಿಳೆಯರು ಸ್ವಯಂ ಪ್ರೇರಣೆಯಿಂದ ವಚನಗಳನ್ನು ರಚಿಸಿದರು. ಸುಮಾರು ೩೦ಕ್ಕೂ ಹೆಚ್ಚು ವಚನಕಾರ್ತಿಯರು ಸಾಹಿತ್ಯ ಸೃಷ್ಟಿಸಿದ ಅಪೂರ್ವ ಸಂದರ್ಭವಿದು. ಅಕ್ಕಮಹಾದೇವಿ ಮುಕ್ತಾಯಕ್ಕ, ಮಹಾದೇವಮ್ಮ (ಮೋಳಿಗೆ ಮಾರಯ್ಯನ ಪತ್ನಿ) ಲಕ್ಕಮ್ಮ (ಆಯ್ದಕ್ಕಿ ಮಾರಯ್ಯನ ಪತ್ನಿ), ನೀಲಾಂಬಿಕೆ, ಗಂಗಾಂಬಿಕೆ, ಕಾಳವ್ವೆ, ಗೊಗ್ಗವ್ವೆ ಸತ್ಯಕ್ಕ, ಇವರ ವಚನಗಳಲ್ಲಿ ಕಂಡು ಬರುವ ಸಹಜತೆ, ನಿರ್ಭೀತಿ, ಆತ್ಮವಿಶ್ವಾಸ ಅದ್ಭುತವಾದದ್ದು. ಇಷ್ಟದೇವರ ಪರಿಕಲ್ಪನೆ ಮೂಲಕ ಲೌಕಿಕ ಪ್ರಭುತ್ವ ನಿರಾಕರಿಸಿ, ಅಲೌಕಿಕ ಪ್ರಭುಗಳ ಹುಡುಕಾಟ ನಡೆಸಿದವರಿವರು. ಅಕ್ಕನಂತಹ ಕವಯಿತ್ರಿ, ಕನ್ನಡ ಸಾಹಿತ್ಯ ಶ್ರೇಷ್ಠ ಕ್ಷೇತ್ರದಲ್ಲಿ ಇಂದಿಗೂ ಹುಟ್ಟಲಿಲ್ಲ ಎಂದು ವಿಮರ್ಶಕರು ಅಭಿಪ್ರಾಯ ಪಡುತ್ತಾರೆ. 'ಭವ ಬಂಧನ' ಅವಳ ಅರ್ಥದಲ್ಲಿ ಮಹಿಳೆ ದೈಹಿಕವಾಗಿ, ಮಾನಸಿಕವಾಗಿ, ವೈಚಾರಿಕವಾಗಿ ತನ್ನ ಆತ್ಮೋನ್ನತಿಗಾಗಿ ಸ್ವತಂತ್ರಳಾಗ



ಬೇಕು ಎನ್ನುವುದೇ ಆಗಿದೆ. ''ಸಾವಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು'' ಎನ್ನುವ ಅವಳ ನಿರಾಕರಣೆ ಕೇವಲ ಒಬ್ಬ ಪುರುಷನ ನಿರಾಕರಣೆ ಮಾತ್ರವಾಗಿರದೆ, ರಾಜತ್ವವನ್ನೇ ನಿರಾಕರಿಸುವ ಸವಾಲಾಗಿದೆ. ಆತ್ಮನಿವೇದನೆಯೇ ಮುಖ್ಯವಾಗಿರುವ ಅಕ್ಕನ ವಚನಗಳಲ್ಲಿ ಸಮಾಜ ವಿಡಂಬನೆಯೂ ಇದೆ. ವೇದ, ಶಾಸ್ತ್ರಗಳ ಪೊಳ್ಳುತನ ಬಯಲಿಗೆಳೆವ ದಿಟ್ಟತನವಿದೆ. ಕವಿ ಹೃದಯದ ಅಕ್ಕ ಭಕ್ತಳಾಗಿ, ಸಾಧಕಳಾಗಿ, ಅನುಭಾವಿಯಾಗಿ, ಸ್ತ್ರೀಕುಲಕ್ಕೆ ಆದರ್ಶಪ್ರಾಯಳಾಗಿದ್ದಾಳೆ. ಕೆಳವರ್ಗದಿಂದ ಬಂದ ವಚನಕಾರ್ತಿಯರಲ್ಲಿ ಸಮಾಜ ವ್ಯವಸ್ಥೆಯ ಬಗ್ಗೆ ಪ್ರತಿರೋಧ ಸ್ವಾಭಿಮಾನದ ಅಭಿವ್ಯಕ್ತಿ ದಟ್ಟವಾಗಿ ಕಂಡುಬರುತ್ತವೆ.

*''ಎನ್ನ ಕರಣಂಗಳ ಅಂಗದಲಿ ಕಟ್ಟುವೆ*
*ಗುರುಲಿಂಗ ಜಂಗಮರ ಕಾಲ ಕಟ್ಟುವೆ*
*ವ್ರತಭ್ರಷ್ಟರನಿಟ್ಟೊರಸುವೆ,*
*ಸುಟ್ಟು ತುರತುರನೆ ಕೂರುವೆ*
*ನಿರ್ಭೀತಿ ನಿಜಲಿಂಗದಲ್ಲಿ''*

ಕಾಲಕಣ್ಣಿಯ ಕಾಯಮ್ಮನ ವಚನದಲ್ಲಿ ಭಕ್ತಿಯ ತೀವ್ರ ಕಳಕಳಿ ಪ್ರಾಮಾಣಿಕತನ ಮನಮುಟ್ಟುತ್ತದೆ. ''ನಿರ್ಭೀತಿ ನಿಜಲಿಂಗ'' ಈಕೆಯ ಅಂಕಿತ. ಸೂಳೆ ಸಂಕವ್ವೆಯ ಅಂಕಿತ 'ನಿರ್ಲಜ್ಜೇಶ್ವರ' ಈ ವಚನಕಾರ್ತಿಯರು ಸಮಾಜದಲ್ಲಿ ಕಂಡುಬಂದ ಅನೇಕ ಲೋಪದೋಷಗಳನ್ನು ಅಂಜಿಕೆಯಿಲ್ಲದೆ ದಿಟ್ಟತನದಿಂದ ಅಭಿವ್ಯಕ್ತಿಗೊಳಿಸಿರುವುದನ್ನು ಅವರ ವಚನಗಳಲ್ಲಿ ಕಾಣಬಹುದು.

ವಚನ ಸಾಹಿತ್ಯದ ನಂತರ ದಾಸ ಸಾಹಿತ್ಯದಲ್ಲಿ ಭೀಮವ್ವ, ಗಿರಿಯಮ್ಮ, ಚೆಲುವಾಂಬೆಯರು ಕಾವ್ಯರಚನೆ ಮಾಡಿದ್ದಾರೆ. ವಚನಕಾರ್ತಿಯರಲ್ಲಿ ಕಂಡುಬರುವ ಸಾಮಾಜಿಕ ಅಸಮಾನತೆಯ ಬಗ್ಗೆ ಸಿಡಿದೇಳುವ ದಿಟ್ಟತನ. ಅವುಗಳನ್ನು ಅಭಿವ್ಯಕ್ತಪಡಿಸುವಲ್ಲಿ ಕಂಡುಬರುವ ಕಳಕಳಿ ದಾಸಸಾಹಿತ್ಯ ಪರಂಪರೆಯಲ್ಲಿ ಬಂದ ಕವಿಯತ್ರಿಯರಲ್ಲಿ ಸ್ಪಷ್ಟವಾಗಿ ಕಂಡುಬರುವುದಿಲ್ಲ. ಇವರ ಸಾಹಿತ್ಯ ರಚನೆಯಲ್ಲಿ ಭಕ್ತಿಗೆ ಹೆಚ್ಚು ಪ್ರಾಧಾನ್ಯತೆ ಕೊಟ್ಟಂತೆ ಸಮಾಜದ ಪರಿವರ್ತನೆಗೆ ಹೆಚ್ಚು ಗಮನಕೊಡದಿರುವುದು ಕಂಡುಬರುತ್ತಿದೆ. ವೈರಾಗ್ಯದ ಹಿನ್ನೆಲೆಯಲ್ಲಿ ಚಿಂತನೆಮಾಡಿದಷ್ಟು ಮಹಿಳೆಯರ ಸ್ಥಿತಿಗತಿಯ ಬಗ್ಗೆ ಚಿಂತನೆ ಮಾಡಲಿಲ್ಲ.

ಹದಿನೇಳನೆಯ ಶತಮಾನದಲ್ಲಿ ಸಂಚಿಹೊನ್ನಮ್ಮನ ''ಹದಿಬದೆಯ ಧರ್ಮ'' ಗ್ರಂಥವು ಕಾವ್ಯಗುಣಗಳಿರುವ ವಿಶಿಷ್ಟ ಕೃತಿಯಾಗಿದೆ. ಕೌಟುಂಬಿಕ ನೆಲೆಯಲ್ಲೇ ಹೆಣ್ಣನ್ನು ಗುರುತಿಸುವ ಹೊನ್ನಮ್ಮನ ಕಾವ್ಯದಲ್ಲಿ ಪ್ರತಿಭಟನೆಯ ತೀವ್ರತೆ ಕಂಡುಬರುವುದು.

### ಆಧುನಿಕ ಮಹಿಳಾ ಸಾಹಿತ್ಯ

ಹೊಸ ಚಿಂತನೆ, ಹೊಸ ಪ್ರಭಾವಗಳ ಹಿನ್ನೆಲೆಯಲ್ಲಿ ಮೂಡಿಬಂದಿದ್ದೇ ಆಧುನಿಕ ಮಹಿಳಾ ಸಾಹಿತ್ಯ. ಬದಲಾದ ರಾಜಕೀಯ, ಸಾಮಾಜಿಕ ಸಂದರ್ಭ, ಶಿಕ್ಷಣ, ಆರ್ಥಿಕ ಸ್ವಾತಂತ್ರ್ಯ, ಸಾಂಸ್ಕೃತಿಕ ಅಭಿವ್ಯಕ್ತಿ, ಮಹಿಳಾ ಸಂವೇದನೆ ಪ್ರತಿಭಟನೆ – ಇವು ಆಧುನಿಕ ಮಹಿಳಾ ಸಾಹಿತ್ಯದ ಹಿಂದಿರುವ ಪ್ರೇರಣೆಗಳು. ಗಾಂಧೀಜಿಯವರ ಅಸಹಕಾರ ಆಂದೋಲನದಲ್ಲಿ ಸ್ತ್ರೀಯರು ಸ್ವಯಂಪ್ರೇರಣೆಯಿಂದ ದೇಶಸೇವೆ, ಸಮಾಜಸೇವೆಯಲ್ಲಿ ತೊಡಗಿಸಿಕೊಂಡರು. ಅನೇಕರು ರಾಷ್ಟ್ರೀಯ ಏಕತೆಗಾಗಿ ದೇಶಗೀತೆಗಳನ್ನು ರಚಿಸಿದರು. ಸತಿ ಸಹಗಮನ, ಬಾಲ್ಯವಿವಾಹದಂತಹ ಅಮಾನವೀಯ ಪದ್ಧತಿಗಳು ಆಚರಣೆಯಲ್ಲಿರುವುದನ್ನು ಪ್ರತಿಭಟಿಸುವ ಸಾಮರ್ಥ್ಯವನ್ನು ಬೆಳೆಸಿಕೊಂಡ ಪರ್ವಕಾಲ. ರಾಮಾಯಣ, ಮಹಾಭಾರತ, ಪುರಾಣ, ವಚನ ಸಾಹಿತ್ಯ – ಇವುಗಳ ಅಧ್ಯಯನದಿಂದ ಮಹಿಳೆ ಆತ್ಮ ಸಂಸ್ಕಾರ ಪಡೆದ ಕಾಲವಿದು. ಈ ಎಲ್ಲಾ ಬೆಳವಣಿಗೆ, ಪ್ರೋತ್ಸಾಹಗಳ ಹಿನ್ನೆಲೆಯಲ್ಲಿ ನಂಜನಗೂಡಿನ ತಿರುಮಲಾಂಬಾ ತಿರುಮಲೆ ರಾಜಮ್ಮ, ಬೆಳಗೆರೆ ಜಾನಕಮ್ಮ, ರಾಜಮ್ಮ ಗಿರಿಬಾಲೆ, ಜಯದೇವ ತಾಯಿಲಿಗಾಡೆ, ಮೊದಲಾದ ಮಹಿಳಾ ಸಾಹಿತಿಗಳು ಸಾಹಿತ್ಯ ಸೃಷ್ಟಿಯಲ್ಲಿ ತಮ್ಮನ್ನು ತೊಡಗಿಸಿ ಕೊಂಡರು. ಕತೆ, ಕಾದಂಬರಿ, ಕಾವ್ಯ, ನಾಟಕ, ಪ್ರಬಂಧ – ಹೀಗೆ ನಾನಾ ಪ್ರಕಾರಗಳಲ್ಲಿ ಮಹಿಳಾ ಸಾಹಿತ್ಯ ತನ್ನ ಅಭಿವ್ಯಕ್ತಿ ಕಂಡುಕೊಂಡಿತು. ೧೯೫೦ರ ದಶಕದಲ್ಲಿ ನಂಜನಗೂಡಿನ ತಿರುಮಲಾಂಬಾ ಪ್ರಥಮ ಪ್ರಕಾಶಕಿ; ಪತ್ರಕರ್ತೆ ಹಾಗೂ ಕಾದಂಬರಿಕರ್ತೆಯಾಗಿ ಎಲ್ಲರ ಗಮನ ಸೆಳೆದವರು.

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ನವೋದಯ, ಪ್ರಗತಿಶೀಲ, ನವ್ಯ ದಲಿತ ಬಂಡಾಯ – ಈ ಚಳುವಳಿಗಳ ನಂತರ ಪ್ರಮುಖ ಚಳುವಳಿಯಾಗಿ ಕಾಣಿಸಿಕೊಂಡದ್ದು ಸ್ತ್ರೀವಾದಿ ಚಳುವಳಿ. ಹಾಗೆ ನೋಡಿದರೆ ಮೊದಲ ಬಂಡಾಯದ ಧ್ವನಿ ಮೊಳಗಿದ್ದು ಹನ್ನೆರಡನೆ ಶತಮಾನದಲ್ಲೇ 'ಭಾರತಿ' ಕಾವ್ಯ ನಾಮದ ತಿರುವಲೆ ರಾಜಮ್ಮ – 'ತಪಸ್ವಿನಿ', 'ಮಹಾಸತಿ' ಎಂಬ ಕಾವ್ಯ ನಾಟಕಗಳನ್ನೊಳಗೊಂಡಂತೆ ಹದಿನಾಲ್ಕು ಕೃತಿಗಳನ್ನು ರಚಿಸಿದ್ದಾರೆ. ಸರಸ್ವತಿಬಾಯಿ ರಾಜವಾಡೆ, ಕೊಡಗಿನ ಗೌರಮ್ಮ, ಬೆಳಗೆರೆ ಜಾನಕಮ್ಮ, ಸೀತಾ ಪಡುಕೋಣೆ – ಮೊದಲಾದವರು ಸಾಹಿತ್ಯ ರಚನೆಯ ಮೂಲಕ ಬದುಕಿನಲ್ಲಿ ನೆಮ್ಮದಿಯನ್ನು ಪಡೆದುಕೊಂಡವರು. ತ್ರಿಪದಿಯಲ್ಲಿ ''ಸಿದ್ಧರಾಮೇಶ್ವರ ಪುರಾಣ'' ರಚಿಸಿದ ಜಯದೇವಿ ತಾಯಿ ಲಿಗಾಡೆ, ಮಹಾಛಂದಸ್ಸಿನಲ್ಲಿ ''ಶ್ರೀ ವಿವೇಕಾನಂದ ವಿಜಯ'' ಮಹಾಕಾವ್ಯ ರಚಿಸಿದ ''ಮಲ್ಲಿಕಾ'' ಹಾಗೂ ಶ್ರೀಮತಿ ಸುಲೋಚನಾದೇವಿ ಆರಾಧ್ಯ – ಈ ಕಾಲದ ಕೆಲವು ಪ್ರಮುಖ ಲೇಖಕಿಯರು. ಬೆಳಗೆರೆ ಜಾನಕಮ್ಮನವರ 'ಕಲ್ಯಾಣ' ಕವನ ಸಂಕಲನದಲ್ಲಿ ಹೆಣ್ಣಿನ ಬಗೆಗಿನ ಕಾಳಜಿ, ದಿಟ್ಟತನಕ್ಕೆ ಪ್ರೋತ್ಸಾಹ, ದೇಶಭಕ್ತಿಯ ಮಹತ್ವ ವ್ಯಕ್ತವಾಗಿದೆ. ಶಿವಶರಣರ ಮಹತ್ವವನ್ನು ಸರಳ ಸುಂದರವಾಗಿ ರಚಿಸಿರುವ ಜಯದೇವಿ ತಾಯಿಲಿಗಾಡೆ ಸ್ವಾತಂತ್ರ್ಯ ಪೂರ್ವದ ಹಾಗೂ ಸ್ವಾತಂತ್ರ್ಯ ನಂತರದ







ಘಟನೆಗಳನ್ನು ತಮ್ಮ ಕವಿತೆಗಳಲ್ಲಿ ಮಾರ್ಮಿಕವಾಗಿ ಅಭಿವ್ಯಕ್ತಿಸಿದ್ದಾರೆ. ಮಂಡ್ಯದಲ್ಲಿ ನಡೆದ ೪೮ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆ ಮಾಡಿದ್ದು ಮಹಿಳಾ ಸಾಹಿತ್ಯ ಕ್ಷೇತ್ರಕ್ಕೆ ಸಂದ ಗೌರವವೆನ್ನಬೇಕು.

೧೯೭೦ರಿಂದ ಕತೆ, ಕಾದಂಬರಿ ಹಾಗೂ ಕಾವ್ಯಗಳ ಮಹಾಪೂರವೇ ಹರಿದುಬಂದಿತು. ೧೯೭೫ನೇ ವರ್ಷವನ್ನು ಜಾಗತಿಕ ಮಹಿಳಾ ವರ್ಷ ಎಂದು ಘೋಷಿಸಲ್ಪಟ್ಟಿತು. ಇದೇ ವರ್ಷ ಅಖಿಲ ಕರ್ನಾಟಕ ಲೇಖಕಿಯರ ಸಮ್ಮೇಳನ ನಡೆಯಿತು. ನಾಡಿನ ಮೂಲೆಮೂಲೆಯಿಂದ ಬಂದ ಲೇಖಕಿಯರ ಸಮಾಗಮದಲ್ಲಿ ಚರ್ಚೆ, ಸಂವಾದ, ಗೋಷ್ಠಿ ನಡೆದದ್ದು ಬಹಳ ಮುಖ್ಯ. ಶತಶತಮಾನಗಳಿಂದ ಮನೆಮಾಡಿಕೊಂಡಿದ್ದ ಅನ್ಯಾಯ, ಕ್ರೌರ್ಯ, ದೌರ್ಜನ್ಯಗಳನ್ನು ಬಯಲಿಗೆಳೆದು, ಇದುವರೆಗಿನ ಅಳುಕು ಹಿಂಜರಿಕೆಗಳನ್ನು ಕಿತ್ತೊಗೆದು, ವಿಚಾರ ಮಾಡುವ ಶಕ್ತಿಯನ್ನು ಬೆಳೆಸಿಕೊಂಡಿದ್ದಾರೆ. ಟಿ. ಸುನಂದಮ್ಮ, ಸಾಯಿಸುತೆ, ಮಲ್ಲಿಕಾ, ಕಡಿದಾಳ್ ಮಂಜಪ್ಪ ಡಾ. ಕಮಲಾಹಂಪನಾ, ಹೆಚ್.ವಿ. ಸಾವಿತ್ರಮ್ಮ ಮೊದಲಾದವರು ಸಾಹಿತ್ಯ ಕೃಷಿಯಲ್ಲಿ ತೊಡಗಿಸಿಕೊಂಡು ಮನೋವಿಜ್ಞಾನದ ಹಿನ್ನೆಲೆಯಲ್ಲಿ ಬರೆದರು. ಪ್ರಮುಖ ಕಾದಂಬರಿಕಾರ್ತಿ ತ್ರಿವೇಣಿ ಅವರ ಕೊಡುಗೆ ಅಪಾರ. ವೈದ್ಯಕೀಯ ಕ್ಷೇತ್ರಕ್ಕೆ ಕೊಡುಗೆಯಿತ್ತ ಡಾ. ಅನುಪಮಾನಿರಂಜನ, ಎಂ.ಕೆ. ಇಂದಿರಾ, ವಾಣಿ, ಉತ್ತರ ಕರ್ನಾಟಕದ ಗೀತಾಕುಲಕರ್ಣಿ – ಕತೆ ಕಾದಂಬರಿಗಳ ಕ್ಷೇತ್ರಕ್ಕೆ ಗಮನಾರ್ಹ ಕೊಡುಗೆ ನೀಡಿದ್ದಾರೆ. ಬಹುಮಟ್ಟಿಗೆ ಕುಟುಂಬ ಕೇಂದ್ರೀತ ಜೀವನವನ್ನು ಆಧರಿಸಿ ತಮ್ಮ ಗ್ರಹಿಕೆಯನ್ನು ರೂಪಿಸಿಕೊಂಡ ಬರಹಗಾರ್ತಿಯರು ಕಥಾಸಾಹಿತ್ಯ ರಚಿಸಿದ್ದಾರೆ.

೧೯೭೫ರ ನಂತರ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡ ಮಹಿಳೆಯರಲ್ಲಿ ಪ್ರತಿಭಟನೆಯ ಕೆಚ್ಚಿದೆ, ಸ್ವಾಭಿಮಾನ ಎಚ್ಚರವಿದೆ, ಆತ್ಮಗೌರವಕ್ಕೆ ಎದುರಾಗುವ ವ್ಯವಸ್ಥೆಗಳ ಬಗ್ಗೆ ಬಂಡಾಯದ ಧ್ವನಿ ಇದೆ. ಪಾಶ್ಚಾತ್ಯ ಮಹಿಳಾ ವಾದ ಪ್ರಭಾವಬೀರಿದ ಕಾಲವಿದು. ಅಮೇರಿಕೆಯ ಮಾರ್ಗರೆಟ್ ಪುಲ್ಲರ ಎಂಬ ಮಹಿಳಾವಾದಿಯ ಅಭಿಪ್ರಾಯ ಬರಹಗಾರ್ತಿಯರಲ್ಲಿ ಹೊಸ ಚೈತನ್ಯ ಮೂಡಿಸಿತು. ಮಹಿಳೆಗೆ ಬೇಕಾಗಿರುವುದು ಸ್ವೇಚ್ಛೆ ಅಲ್ಲ, ಆಳುವ ಅಧಿಕಾರವಲ್ಲ, ಆಕೆಗೆ ಅವಶ್ಯವಿದ್ದದ್ದೂ ಸಹಜವಾಗಿ ಬೆಳೆಯುವ ಅವಕಾಶ, ಸ್ವಂತ ಬುದ್ಧಿಯನ್ನು ಉಪಯೋಗಿಸುವ ಅವಕಾಶ. ಈ ಪ್ರತಿಭಟನೆಯ ಧೋರಣೆ ವ್ಯಕ್ತಿ ಕೇಂದ್ರಿತ ಜೀವನವನ್ನು ಆಧರಿಸಿ ಗ್ರಹಿಕೆಯನ್ನು ರೂಪಿಸಿಕೊಂಡ ಕವಿಯಿತ್ರಿಯರಲ್ಲಿ ದಟ್ಟವಾಗಿರುವುದು ಕಂಡುಬರುತ್ತಿದೆ.

ಮಹಿಳಾ ಸಾಹಿತ್ಯದ ವಿಮರ್ಶೆ ಎರಡು ನೆಲೆಗಳಲ್ಲಿ ನಡೆಯುತ್ತಿದೆ. ಮಹಿಳಾ ಸಾಹಿತ್ಯವನ್ನು ಅಡುಗೆ ಮನೆ ಸಾಹಿತ್ಯವೆಂದೂ, ಸಪ್ಪೆಯೆಂದೂ, ವೈಚಾರಿಕತೆ ಇಲ್ಲವೆಂದೂ, ತಾತ್ತ್ವಿಕ ಚಿಂತನೆಗಳಿಲ್ಲವೆಂದೂ ಗೇಲಿ ಮಾಡುವ ನೆಲೆ.

ಎರಡನೆ ನೆಲೆ ಮಹಿಳೆಯರ ಗ್ರಹಿಕೆ ಅಭಿವ್ಯಕ್ತಿಗೆ ಇರುವ ಅಡ್ಡಿ ಆತಂಕಗಳನ್ನು ಕುರಿತು ಮಾತನಾಡುವುದೂ ಇದೆ. ಈ ಎರಡೂ ನೆಲೆಯ ಮಿತಿಗಳನ್ನು ಮೀರುವ ಸಾಹಿತ್ಯ ಸೃಷ್ಟಿಯಾಗಿರುವುದೂ ನಿಜ. ವಸ್ತು ವೈವಿಧ್ಯ, ಹೆಣ್ಣಿನ ಅನುಭವ ಹಾಗೂ ಸರವೇದನೆಗಳು, ನಿರ್ಭಿಡೆಯ ಅಭಿವ್ಯಕ್ತಿ ಮುಕ್ತಲಯ ವಿನ್ಯಾಸ, ಭಾಷೆಯ ಸೊಗಡು, ರೂಪಕಗಳ ಬಳಕೆ, ಚಿತ್ರಕಶಕ್ತಿ – ಈ ಎಲ್ಲ ಗುಣಗಳಿಂದ ಕೂಡಿದ ಕವಿತೆ, ಕತೆಗಳ ಸೃಷ್ಟಿಯಾಗುತ್ತಲೇ ಇದೆ.

ಕಥಾಸಾಹಿತ್ಯಕ್ಕೆ ವೈದೇಹಿ, ಡಾ. ಸುಧಾಮೂರ್ತಿ, ವೀಣಾ – ಗಟ್ಟಿ ಧ್ವನಿ ನೀಡಿದ್ದಾರೆ. ವೀಣಾರವರ 'ಓ ಗಂಡಸರೆ ನೀವೆಷ್ಟು ಒಳ್ಳೆಯವರು' ಪುರುಷ ಪ್ರಧಾನ ಸಮಾಜವನ್ನು ಅದರೆಲ್ಲ ತಣ್ಣಗಿನ ಕ್ರೌರ್ಯವನ್ನು ಅನಾವರಣಗೊಳಿಸಿದೆ. ಸ್ತ್ರೀ ಸಾಹಿತ್ಯವೆ ಪ್ರತ್ಯೇಕ ಎನ್ನುವುದಾದರೆ ಕನ್ನಡ ಸಾಹಿತ್ಯ ಚರಿತ್ರೆಯೆ ಅಪೂರ್ಣ ಹಾಗೂ ಪಕ್ಷಪಾತಿ ಎಂದಾಗುತ್ತದೆ. ದಲಿತ ಮತ್ತು ಬಂಡಾಯದ ನಂತರ ಸ್ತ್ರೀವಾದವನ್ನು ಸಾಹಿತ್ಯದ ಚಳುವಳಿಯಾಗಿ, ಒಂದು ಕಾಲಘಟ್ಟವಾಗಿ ಗುರ್ತಿಸಬೇಕಾದ ಅಗತ್ಯವಿದೆ. ಡಾ. ಬಿ.ಎಸ್. ಸುಮಿತ್ರದೇವಿ, ಡಾ. ವಿಜಯದಬ್ಬೆ, ಡಾ. ವಿಜಯಸುಬ್ಬರಾವ್, ಡಾ. ಪ್ರಭಾವತಿ – ಈ ಹಿನ್ನೆಲೆಯಲ್ಲಿ ಸಾಕಷ್ಟು ದುಡಿದಿದ್ದಾರೆ. ಹೋರಾಟ ಮಾಡಿದ್ದಾರೆ. ಪುರುಷ ಪ್ರಧಾನ ಸಮಾಜದಲ್ಲಿ 'ಶೋಷಿತ'ಳಾದ ಮಹಿಳೆಯ ಗ್ರಹಿಕೆಯ ಜಗತ್ತು ಅಧಿಕೃತವಾಗಿ ಶೋಧಿತವಾಗಿಲ್ಲ, ದಾಖಲಾಗಿಲ್ಲ ಎನ್ನುವುದೇ ವಿಪರ್ಯಾಸ. ಮಹಿಳಾ ಸಾಹಿತ್ಯವನ್ನು ಮಹಿಳಾ ವಿಮರ್ಶಕರೇ ವಿಮರ್ಶಿಸಿದಾಗ ನ್ಯಾಯ ಸಿಗಬಹುದು.

ಭಯವೇ ಧರ್ಮದ ಯುಗಧರ್ಮವಾಗಿದೆ ...... ಆಧುನಿಕ ಜಗತ್ತು, 'ಸರ್ವಂ ಸ್ವಾಹಾ' ಎನ್ನುವುದೇ ಮಹಾಮಂತ್ರವಾಗಿ ಎಲ್ಲ ಕ್ಷೇತ್ರಗಳನ್ನು ಆಕ್ರಮಿಸಿದೆ. ಸ್ನೇಹ, ವಿಶ್ವಾಸ, ನಂಬಿಕೆ ಪ್ರಾಮಾಣಿಕತೆಗಳ ಬದಲು, ಅನಾರೋಗ್ಯಕರ ಸ್ಪರ್ಧಾಮನೋಭಾವ, ಅಸೂಯೆ, ಅಪನಂಬಿಕೆ ನಮ್ಮೆಲ್ಲರನ್ನು ಕಾಡುತ್ತಿವೆ. ಇಂತಹ ಸಂಕೀರ್ಣ ಸಮಾಜದಲ್ಲಿ, ಜಾಗತೀಕರಣ ಅಬ್ಬರದಲ್ಲಿ ಸಾಹಿತಿಯ ಜವಾಬ್ದಾರಿ ಹಿರಿದಾದದ್ದು. ಎಲ್ಲ ರಂಗಗಳಲ್ಲಿ ದ್ವಂದ್ವ ಮನಸ್ಥಿತಿ ಕಾಡುತ್ತಿದೆ. ಸೂಕ್ಷ್ಮ ಸಂವೇದನೆಯನ್ನು ಹುಟ್ಟಿಸುವ, ಅಭಿಮಾನವನ್ನು ಮೆರೆವ, ತನ್ನತನ ಕಂಡುಕೊಳ್ಳುವ ಹಾದಿ ಪ್ರಜ್ಞಾವಂತ ಸಾಹಿತಿ ಹುಡುಕಿಕೊಡಬೇಕಾಗಿದೆ.

*

## ದೇವನಹಳ್ಳಿ : ಗುರುವಂದನ ಮತ್ತು ಬಸವ ಜಯಂತಿ ಕಾರ್ಯಕ್ರಮ



ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರಿಂದ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ

''ಶರಣರ ಆದರ್ಶಗಳನ್ನು ಸಾಕಾರಗೊಳಿಸುವಲ್ಲಿ ಸಿದ್ಧಗಂಗಾಮಠ ಶ್ರಮಿಸುತ್ತಿರುವುದು ಅಂಧಕಾರದ ನಡುವೆ ಆಶಾಕಿರಣವಾಗಿದೆ. ಆಧ್ಯಾತ್ಮಿಕ ನೆಲೆಯಲ್ಲಿ ಮಠದ ಕಾರ್ಯ ಶ್ಲಾಘನೀಯ'' ಎಂದು ಮುಖ್ಯಮಂತ್ರಿ ಶ್ರೀ ಎಸ್.ಎಂ. ಕೃಷ್ಣ ಅವರು ಮೆಚ್ಚುಗೆ ವ್ಯಕ್ತಪಡಿಸಿದರು.

''ಶತಮಾನದ ಹೊಸ್ತಿಲಲ್ಲಿರುವ ಶ್ರೀಗಳು ತ್ರಿವಿಧ ದಾಸೋಹಗಳ ಮೂಲಕ ಅನ್ನ, ಜ್ಞಾನದಾಹ ನೀಗಿಸುತ್ತ ಸೇವೆ ಸಲ್ಲಿಸುತ್ತಿದ್ದಾರೆ'' ಎಂದು ಬಣ್ಣಿಸಿದರು.

ಮುಖ್ಯಮಂತ್ರಿಗಳು ಜೂನ್ ೨೦ರಂದು ದೇವನಹಳ್ಳಿಯಲ್ಲಿ ಏರ್ಪಡಿಸಲಾಗಿದ್ದ ತ್ರಿವಿಧ ದಾಸೋಹ ಮೂರ್ತಿ, ಕಾಯಕಯೋಗಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಗುರುವಂದನ ಹಾಗೂ ಬಸವ ಜಯಂತಿ ಕಾರ್ಯಕ್ರಮವನ್ನು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿ ಮಾತನಾಡುತ್ತಿದ್ದರು.

ಗುರುವಂದನೆ ಸ್ವೀಕರಿಸಿ ಆಶೀರ್ವಚನ ನೀಡಿದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ''ಇಂದಿನ ಪರಿಸ್ಥಿತಿಯಲ್ಲಿ ಭಾರತಕ್ಕೆ ದೇಶಪ್ರೇಮ ಹೊಂದಿದ, ನಿಸ್ವಾರ್ಥ ರಾಜಕಾರಣಿಗಳ ಅಗತ್ಯವಿದೆ'' ಎಂದರು.

''ಇಂದಿನ ಮಂತ್ರಿಗಳು ತಾವು ಇಂತಹ ಜಾತಿಗೆ ಸೇರಿದ ಮಂತ್ರಿ ಎಂದು ಗುರುತಿಸಿಕೊಳ್ಳುತ್ತಾರೆ. ಆದರೆ, ಯಾವುದೇ ಮಂತ್ರಿ ಇಡೀ ದೇಶದ ಮಂತ್ರಿಯಾಗಬೇಕೇ ಹೊರತು, ಜಾತಿ ರಾಜಕೀಯ ಮಾಡಬಾರದು'' ಎಂದು ಎಚ್ಚರಿಸಿದರು.

ಮುಖ್ಯ ಅತಿಥಿಯಾಗಿದ್ದ ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ರಾಣಿ ಸತೀಶ್ ಮಾತನಾಡಿ, ಶ್ರೀ ಶೈಲಂನಲ್ಲಿ ಅಕ್ಕಮಹಾದೇವಿಯ ಪ್ರತಿಮೆ ಪ್ರತಿಷ್ಠಾಪನೆಗೆ ಆಂಧ್ರಪ್ರದೇಶ ಸರಕಾರ ೪ ಲಕ್ಷ ರೂ. ಬಿಡುಗಡೆ ಮಾಡಿದೆ ಎಂದು ತಿಳಿಸಿದರು.







ವೇದಿಕೆಯಲ್ಲಿ : ಶ್ರೀ ಎಸ್.ಎಂ. ಕೃಷ್ಣ, ಪರಮಪೂಜ್ಯ ಶ್ರೀ ಶ್ರೀಗಳವರು ಮತ್ತು ಶ್ರೀ ನಿರ್ಮಲಾನಂದ ಸ್ವಾಮೀಜಿ ಅವರು

ನಗರಾಭಿವೃದ್ಧಿ ಸಚಿವ ಶ್ರೀ ಡಿ.ಕೆ. ಶಿವಕುಮಾರ್ ಅವರು ''ಗುರು ಸಂಸ್ಕೃತಿಯೇ ಭಾರತದ ದೊಡ್ಡ ಆಸ್ತಿ ಭಾರತದ ಮಾರ್ಗದರ್ಶನ ವಿಶ್ವದ ಬೇರೆ ದೇಶಗಳಿಗೂ ಅಗತ್ಯವಿದೆ'' ಎಂದರು.

ಚಿಕ್ಕಬಳ್ಳಾಪುರ ಆದಿಚುಂಚನಗಿರಿ ಶಾಖಾ ಮಠದ ಶ್ರೀ ನಿರ್ಮಲಾನಂದ ಸ್ವಾಮೀಜಿ, ವಿಜಯಪುರ ಬಸವ ಕಲ್ಯಾಣ ಮಠದ ಶ್ರೀ ಮಹಾದೇವ ಸ್ವಾಮೀಜಿ ಆಶೀರ್ವಚನ ನೀಡಿದರು. ಸಮಾಜಕಲ್ಯಾಣ ಸಚಿವ ಶ್ರೀ ಎ. ಕೃಷ್ಣಪ್ಪ, ಸಂಸದ ಶ್ರೀ ಕೆ.ಎಚ್. ಮುನಿಯಪ್ಪ, ಜಿ.ಪಂ. ಉಪಾಧ್ಯಕ್ಷೆ ಶ್ರೀಮತಿ ಜಯಲಕ್ಷ್ಮಮ್ಮ, ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಶ್ರೀ ಸಿ. ಸೋಮಶೇಖರ್, ಜೈನ ದೇವಾಲಯದ ಶ್ರೀ ರಾಜೇಶ್ ಜೈನ್, ಶ್ರೀ ರವೀಶ್ ಜೈನ್, ತಾ. ಪಂ. ಅಧ್ಯಕ್ಷ ಶ್ರೀ ವಿ. ನಾರಾಯಣ ಸ್ವಾಮಿ, ಪುರಸಭೆ ಅಧ್ಯಕ್ಷ ಶ್ರೀ ಇಕ್ಬಾಲ್ ಹುಸೇನ್, ಶ್ರೀ ಎಸ್. ರಾಮಯ್ಯ ವೇದಿಕೆಯಲ್ಲಿ ಉಪಸ್ಥಿತರಿದ್ದರು.

## ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ನೂತನ ಗ್ರಂಥಾಲಯ ಉದ್ಘಾಟನೆ




ಪರಮಪೂಜ್ಯ ಶ್ರೀ ಶ್ರೀಗಳವರಿಂದ ಆಶೀರ್ವಚನ. ವೇದಿಕೆಯಲ್ಲಿ : ಪ್ರಾಂಶುಪಾಲರಾದ ಶ್ರೀಮತಿ ಎಸ್. ಅನಸೂಯಮ್ಮ, ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ ಮತ್ತು ಶ್ರೀ ರೇಣುಕಪ್ಪ



ಪರಮಪೂಜ್ಯ ಶ್ರೀ ಶ್ರೀಗಳವರಿಂದ ಗ್ರಂಥಾಲಯ ವೀಕ್ಷಣೆ

"ದೇಶ ಇಂದು ಪ್ರತಿಭಾಸಂಪನ್ನ ಮುಖಂಡತ್ವವನ್ನು ಎದುರು ನೋಡುತ್ತಿದ್ದು, ಅಂತಹ ಪ್ರತಿಭೆಗಳನ್ನು ತಯಾರು ಮಾಡುವ ಕೆಲಸವನ್ನು ಶಿಕ್ಷಕರು ಮಾಡಬೇಕು'' ಎಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ತಿಳಿಸಿದರು.

ಪರಮಪೂಜ್ಯ ಶ್ರೀ ಶ್ರೀಗಳವರು ಸಿದ್ಧಗಂಗಾ ಮಹಿಳಾ ಕಾಲೇಜಿನಲ್ಲಿ ಜೂನ್ ೨೫ರಂದು ಏರ್ಪಡಿಸಿದ್ದ ಪ್ರತಿಭಾ ಪುರಸ್ಕಾರ, ಪೋಷಕರ ಸಭೆ ಹಾಗೂ ಗ್ರಂಥಾಲಯ ಮತ್ತು ಪ್ರಯೋಗಾಲಯ ಪ್ರಾರಂಭೋತ್ಸವ ಸಮಾರಂಭದ ಸಾನ್ನಿಧ್ಯ ವಹಿಸಿ ಆಶೀರ್ವಚನ ನೀಡಿದರು.



ಗ್ರಂಥಾಲಯದ ನೂತನ ಕಟ್ಟಡ

"ಒಂದು ವಿದ್ಯಾಸಂಸ್ಥೆಯ ಬೆನ್ನೆಲುಬು ಆ ಶಾಲೆಯ ಶಿಕ್ಷಕ ವರ್ಗ. ಹಿಂದೆ ಈ ವರ್ಗಕ್ಕೆ ಅತ್ಯಂತ ಹೆಚ್ಚಿನ ಗೌರವವಿತ್ತು. ಆದರೆ ಇಂದು ಶಿಕ್ಷಕ ವರ್ಗಕ್ಕೆ ಸಮಾಜದಲ್ಲಿ ಗೌರವ ಕಡಿಮೆಯಾಗುತ್ತಿದೆ. ಇದಕ್ಕೆ ಕಾರಣವೇನು ಎಂಬುದನ್ನು ಶಿಕ್ಷಕ ವರ್ಗವೇ ಆತ್ಮ ವಿಮರ್ಶೆ ಮಾಡಿಕೊಳ್ಳಬೇಕು'' ಎಂದರು.



ಗ್ರಂಥಾಲಯದಲ್ಲಿ ವಿದ್ಯಾರ್ಥಿನಿಯರು ಮತ್ತು ಅಧ್ಯಾಪಕಿಯರು

ಸಿದ್ಧಗಂಗಾ ಸಂಸ್ಥೆಯ ಗೌರವ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ ಅವರು ಪ್ರತಿಭಾ ಪುರಸ್ಕಾರ ವಿತರಿಸಿ ಮಾತನಾಡಿ, "ಈ ಸಂಸ್ಥೆ ಸ್ವಾಮೀಜಿಯವರ ಸಂಕಲ್ಪ ಹಾಗೂ ನಾಗರಿಕರ ಸಹಾಯದಿಂದ ಅಪಾರ ಸಾಧನೆ ಮಾಡಿದೆ. ಶಿಕ್ಷಕರು ಮತ್ತು ವಿದ್ಯಾರ್ಥಿಗಳು ಇದನ್ನು ಉಳಿಸಿಕೊಂಡು ಹೋಗಬೇಕು'' ಎಂದು ಹೇಳಿದರು. ಪ್ರಾಂಶುಪಾಲರಾದ ಶ್ರೀಮತಿ ಎಸ್. ಅನಸೂಯಮ್ಮ ಅವರು ಅಧ್ಯಕ್ಷತೆ ವಹಿಸಿದ್ದರು.

★





## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೯೪೬. | **ಶ್ರೀ ಕಗ್ಗೇರಪ್ಪ**<br>ಜುಕ್ಕೋನಹಳ್ಳಿ, ಉಜ್ಜನಿಹೊಸಹಳ್ಳಿ ಅಂಚೆ,<br>ದೊಡ್ಡಬಳ್ಳಾಪುರ ತಾಲ್ಲೂಕು,<br>ಬೆಂಗಳೂರು ಗ್ರಾ. ಜಿಲ್ಲೆ – ೫೬೧೨೦೩. | ೨,೦೦೧.೦೦ |
| ೯೪೭. | **ಶ್ರೀ ಎಸ್. ಸಿದ್ದಯ್ಯ ಬಿನ್ ಸಿದ್ದನಂಜಪ್ಪ**<br>ಸಹ ಶಿಕ್ಷಕರು,<br>ಶ್ರೀ ಶಾಲಿವಾಹನ ಪ್ರೌಢಶಾಲೆ,<br>ತಂಡಗ, ತುರುವೇಕೆರೆ ತಾಲ್ಲೂಕು. | ೨,೦೦೦೧.೦೦<br>(೨ನೇ ಕಂತು) |
| ೯೪೮. | **ಶ್ರೀ ಮಲ್ಲಿಕಾರ್ಜುನಯ್ಯ**<br>ವಿಜಯನಗರ,<br>ಬೆಂಗಳೂರು – ೫೬೦ ೦೪೦. | ೧೦,೦೦೧.೦೦<br>(೨ನೇ ಕಂತು) |
| ೯೪೯. | **ಶ್ರೀ ಎಂ. ಶಿವರುದ್ರಯ್ಯ**<br>ಸಹಶಿಕ್ಷಕರು,<br>ಶ್ರೀ ಶಿವಕುಮಾರಸ್ವಾಮಿ ಗ್ರಾಮಾಂತರ<br>ಪ್ರೌಢಶಾಲೆ, ಬ್ಯಾಲಕೆರೆ, ಮಾಗಡಿ ತಾ.<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧,೦೦೦.೦೦<br>(೧ನೇ ಕಂತು) |
| ೯೫೦. | **ಶ್ರೀ ಪಿ.ಎನ್. ಅಪ್ಪೂರಾವ್**<br>ನಂ. ೩೩, ೯ನೇ ಕ್ರಾಸ್,<br>ಎನ್.ಆರ್. ಕಾಲೋನಿ,<br>ಬೆಂಗಳೂರು – ೫೬೦ ೦೧೯.<br>**(ದಿ. ಗಂಗೂಬಾಯಿ ಇವರ ಸ್ಮರಣಾರ್ಥ)** | ೫,೦೦೧.೦೦ |
| ೯೫೧. | **ಶ್ರೀ ಪುಟ್ಟರುದ್ರಯ್ಯ**<br>'ಡಿ' ಗ್ರೂಪ್ ನೌಕರರು,<br>ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ,<br>ಶ್ರೀ ಸಿದ್ಧಗಂಗಾ ಮಠ, ತುಮಕೂರು – ೪. | ೨,೦೦೧.೦೦ |
| ೯೫೨. | **ಪ್ರಾಂಶುಪಾಲರು**<br>ಶ್ರೀ ಸಿದ್ಧಗಂಗಾ ಮಹಿಳಾ ಪ್ರಥಮದರ್ಜೆ ಕಾಲೇಜು,<br>ಬಿ.ಹೆಚ್. ರಸ್ತೆ,<br>ತುಮಕೂರು – ೫೭೨ ೧೦೨. | ೨,೦೦೧.೦೦ |
| ೯೫೩. | **ಶ್ರೀ ಆರ್. ದೊಡ್ಡವೀರಭದ್ರಪ್ಪ**<br>ನಂ. ೫೯೪, ೭೫, 'ಬಿ' ಕ್ರಾಸ್, ೬ನೇ ಬ್ಲಾಕ್,<br>ರಾಜಾಜಿನಗರ,<br>ಬೆಂಗಳೂರು – ೫೬೦ ೦೧೦. | ೨೦೦೧.೦೦ |
| ೯೫೪. | **ಶ್ರೀಮತಿ ಸಿದ್ಧಗಂಗಮ್ಮ**<br>ಮುಖ್ಯಸ್ಥರು, ಸೋಸಿಯಾಲಜಿ ವಿಭಾಗ,<br>ಸಿದ್ಧಗಂಗಾ ಮಹಿಳಾ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು – ೨. | ೪,೦೦೨.೦೦<br>(೨೨ ಮತ್ತು ೨೩ನೇ ಕಂತು) |
| ೯೫೫. | **ಶ್ರೀ ಗುರುಸಿದ್ದಪ್ಪ**<br>ಶಿಕ್ಷಕರು,<br>ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ. | ೧,೦೦೦.೦೦<br>(೧ನೇ ಕಂತು) |
| ೯೫೬. | **ಶ್ರೀಮತಿ ಜಯಶ್ರೀ**<br>ಸಹ ಶಿಕ್ಷಕಿ<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ<br>ಶುಕ್ರವಾರ ಸಂತೆ, ಸಕಲೇಶಪುರ ತಾ. | ೨,೦೦೧.೦೦ |
| ೯೫೭. | **ಶ್ರೀ ಸಿದ್ದಲಿಂಗಯ್ಯ**<br>ಮುಖ್ಯ ಶಿಕ್ಷಕರು, | ೨,೦೦೧.೦೦ |
| ೯೫೮. | **ಶ್ರೀ ಆರ್. ಲಕ್ಷ್ಮಣಯ್ಯ**<br>ಸಹ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೯೫೯. | **ಶ್ರೀ ಜಿ.ಬಿ. ಶೇಖರ್**<br>ಸಹ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೯೬೦. | **ಶ್ರೀ ನಾಗರಾಜು**<br>ಸಹ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೯೬೧. | **ಶ್ರೀ ಜಿ. ಹರಿಯಣ್ಣ**<br>ಹಿಂದಿ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೯೬೨. | **ಶ್ರೀ ಹೆಚ್. ಕೆಂಪರಾಜ್**<br>ಕನ್ನಡ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೯೬೩. | **ಶ್ರೀ ಎಸ್.ಕೆ.ಸಿ. ಶೇಖರ್**<br>ದೈಹಿಕ ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೯೬೪. | **ಶ್ರೀ ಗಂಗರುದ್ರಯ್ಯ**<br>ವೃ. ಶಿಕ್ಷಕರು | ೧,೦೦೧.೦೦<br>(೧ನೇ ಕಂತು) |
| ೯೬೫. | **ಶ್ರೀ ಕೆ.ವಿ. ರಾಮಶೇಷ**<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦<br>(೧ನೇ ಕಂತು) |
| ೯೬೬. | **ಶ್ರೀ ಹೆಚ್.ಆರ್. ಮಹದೇವಯ್ಯ**<br>ಪ್ರ.ಶಾ.ಸ., | ೧,೦೦೧.೦೦<br>(೧ನೇ ಕಂತು) |
| ೯೬೭. | **ಶ್ರೀ ಎಂ. ರಂಗಪ್ಪ**<br>ಸೇವಕ | ೧,೦೦೧.೦೦<br>(೧ನೇ ಕಂತು) |
| ೯೬೮. | **ಶ್ರೀ ಹೆಚ್.ಎಸ್. ಸಿದ್ದಲಿಂಗಪ್ಪ**<br>ಸೇವಕ | ೧,೦೦೧.೦೦<br>(೧ನೇ ಕಂತು) |

ಕ್ರ.ಸಂ. ೯೫೭ ರಿಂದ ೯೬೮ರ ವರೆಗಿನ ವಿಳಾಸ
ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ,
ಪುರುಷನಹಳ್ಳಿ, ದೊಡ್ಡಬಳ್ಳಾಪುರ ತಾಲ್ಲೂಕು,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೯೬೯. | ಶ್ರೀ ಎಂ. ಚೆನ್ನಯ್ಯ<br>ಮುಖ್ಯ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೨,೦೦೦.೦೦ |
| ೯೭೦. | ಶ್ರೀ ಬಿ.ಆರ್. ಗುರುಬಸವಯ್ಯ<br>ದೈಹಿಕ ಶಿಕ್ಷಣ ಶಿಕ್ಷಕರು,<br>ತಂಡಗ, ತುರುವೇಕೆರೆ ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೯೭೧. | ಶ್ರೀ ಟಿ.ಪಿ. ಪದ್ಮರಾಜಯ್ಯ<br>ದ್ವಿತೀಯ ದರ್ಜೆ ಸಹಾಯಕರು,<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ<br>ತಂಡಗ, ತುರುವೇಕೆರೆ ತಾಲ್ಲೂಕು. | ೧,೦೦೧.೦೦<br>(೧ನೇ ಕಂತು) |
| ೯೭೨. | ಶ್ರೀ ಕೆ.ಹೆಚ್. ಸಿದ್ಧಲಿಂಗಯ್ಯ<br>ಬಿನ್ ಹೊನ್ನಪ್ಪ,<br>ಕೇತೋಹಳ್ಳಿ, ಕೆ.ಜಿ. ಹಳ್ಳಿ ಅಂಚೆ,<br>ತುಮಕೂರು ತಾಲ್ಲೂಕು. | ೨,೦೦೧.೦೦ |
| ೯೭೩. | ಶ್ರೀ ಕೆ.ಹೆಚ್. ಪರಮಶಿವಯ್ಯ<br>ಪ್ರಾಂಶುಪಾಲರು,<br>ಶ್ರೀ ಸಿದ್ಧಗಂಗಾ ಸಂಜೆ ಕಾಲೇಜು,<br>ತುಮಕೂರು – ೨. | ೨,೦೦೨.೦೦<br>(೧ನೇ ಮತ್ತು ೨ನೇ ಕಂತು) |
| ೯೭೪. | ಶ್ರೀ ಶಂಭಣ್ಣ<br>ಎಲೆಕ್ಟ್ರಿಕಲ್ ಮತ್ತು ವಾಟರ್‌ಸಪ್ಲೈ ಕಂಟ್ರಾಕ್ಟರ್<br>ದೇವರಾಜ್ ಅರಸ್ ರಸ್ತೆ, ಸರಸ್ವತಿಪುರಂ,<br>ತುಮಕೂರು – ೫. | ೨೫,೦೦೦.೦೦ |
| ೯೭೫. | ಅಧ್ಯಕ್ಷರು, ಶ್ರೀ ಬಸವೇಶ್ವರ ಸಮಿತಿ,<br>ಮೈಕೋ (ರಿ.),<br>ನಂ. ೩೫೫, ೬ನೇ ಮೈನ್, ಲಕ್ಕಸಂದ್ರ ಬಡಾವಣೆ,<br>ಬನ್ನೇರುಘಟ್ಟ ರಸ್ತೆ,<br>ಬೆಂಗಳೂರು – ೩೦. | ೪,೩೭೦.೦೦ |
| ೯೭೬. | ಶ್ರೀ ಕೆ. ಗಂಗಾಧರ್<br>ನಂ. ೨೩೯, ಎಲ್.ಐ.ಜಿ. ಬ್ಲಾಕ್,<br>ಕೆ.ಹೆಚ್.ಬಿ. ಕಾಲೋನಿ,<br>ಕೋರಮಂಗಲ ಬಡಾವಣೆ,<br>ಬೆಂಗಳೂರು – ೯೫. | ೧,೧೧೧.೦೦<br>(೧ನೇ ಕಂತು) |
| ೯೭೭. | ಶ್ರೀ ಸಿ. ಶಂಕರಪ್ಪ<br>ನಿವೃತ್ತ ಇಂಜಿನಿಯರ್,<br>'ವೀರೇಶನಿಲಯ', ನಂ. ೮೫೬/೬೩,<br>೩ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ<br>೨ನೇ ಹಂತ, 'ಡಿ' ಬ್ಲಾಕ್,<br>ರಾಜಾಜಿನಗರ, ಬೆಂಗಳೂರು – ೧೦. | ೨೦೦೧.೦೦<br>(೩ನೇ ಕಂತು) |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೯೭೮. | ಶ್ರೀ ಎಸ್. ಸದಾಶಿವಯ್ಯ<br>ಶ್ರೀ ಸಿದ್ಧಗಂಗಾ ನರ್ಸಿಂಗ್ ಕಾಲೇಜು,<br>ಬಿ.ಹೆಚ್. ರಸ್ತೆ, ತುಮಕೂರು – ೨. | ೨,೦೦೧.೦೦ |
| ೯೭೯. | ಶ್ರೀ ಬಿ.ಎಲ್. ಚಂದ್ರಶೇಖರ್<br>ಮುಖ್ಯ ಶಿಕ್ಷಕರು | ೨,೦೦೧.೦೦ |
| ೯೮೦. | ಶ್ರೀ ಕೆ.ಆರ್. ವೀರಭದ್ರಯ್ಯ<br>ದೈಹಿಕ ಶಿಕ್ಷಕರು | ೨,೦೦೧.೦೦ |
| ೯೮೧. | ಶ್ರೀ ದೊಡ್ಡನಾಗಯ್ಯ<br>ಸಹ ಶಿಕ್ಷಕರು | ೨,೦೦೧.೦೦ |
| ೯೮೨. | ಶ್ರೀ ಎಂ. ಶಾಂತಕುಮಾರ<br>ಶಿಕ್ಷಕರು | ೨,೦೦೧.೦೦ |
| ೯೮೩. | ಶ್ರೀ ಡಿ.ಬಿ. ರುದ್ರಪ್ಪ<br>ಸಹ ಶಿಕ್ಷಕರು | ೨,೦೦೧.೦೦ |
| ೯೮೪. | ಶ್ರೀ ಸಂಜೀವ ಫಕೀರಪ್ಪ ತೇರದಾಳ<br>ಸಹ ಶಿಕ್ಷಕರು | ೨,೦೦೧.೦೦ |
| ೯೮೫. | ಶ್ರೀ ಕೆ.ಎಂ. ಶಿವಕುಮಾರಸ್ವಾಮಿ<br>'ಡಿ' ಗ್ರೂಪ್ ನೌಕರರು | ೨,೦೦೧.೦೦ |
| | ಕ್ರ.ಸಂ. ೯೭೯ ರಿಂದ ೯೮೫ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಅಂಧ ಮಕ್ಕಳ ಪಾಠಶಾಲೆ<br>ಶ್ರೀ ಸಿದ್ಧಗಂಗಾ ಮಠ, ತುಮಕೂರು – ೪. | |
| ೯೮೬. | ಶ್ರೀ ಸಿ. ನಾಗರಾಜು<br>ವ್ಯ. ಶಿಕ್ಷಕರು | ೨,೦೦೧.೦೦ |
| ೯೮೭. | ಶ್ರೀ ಎಸ್.ವಿ. ಗುರುಬಸವದೇವರು<br>ಮುಖ್ಯ ಶಿಕ್ಷಕರು | ೨,೦೦೧.೦೦ |
| ೯೮೮. | ಶ್ರೀ ನಿರಂಜನ ಶಿವಕುಮಾರಸ್ವಾಮಿ<br>ಹಿಂದಿ ಶಿಕ್ಷಕರು | ೨,೦೦೧.೦೦ |
| ೯೮೯. | ಶ್ರೀ ಹೆಚ್.ಎಸ್. ಉಮಾಶಂಕರ್<br>ಸಹ ಶಿಕ್ಷಕರು | ೨,೦೦೧.೦೦ |
| | ಕ್ರ.ಸಂ. ೯೮೬ ರಿಂದ ೯೮೯ರ ವರೆಗಿನ ವಿಳಾಸ<br>ಶ್ರೀ ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆ<br>ರಘುವನಹಳ್ಳಿ, ಕನಕಪುರ ರಸ್ತೆ, ಬೆಂಗಳೂರು – ೬೨. | |
| ೯೯೦. | ಶ್ರೀ ಹೆಚ್.ಪಿ. ರಾಮಯ್ಯ ಮತ್ತು ಕೆಂಪಮ್ಮ<br>ಹಾಲೇನಹಳ್ಳಿ, ನರಸೀಪುರ ಅಂಚೆ,<br>ನೆಲಮಂಗಲ ತಾಲ್ಲೂಕು,<br>ಬೆಂಗಳೂರು ಗ್ರಾಮಾಂತರ ಜಿಲ್ಲೆ. | ೧೦,೦೦೦.೦೦ |





## ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಶತಮಾನೋತ್ಸವ ಸಮಿತಿಗೆ ಒಂದು ಸಾವಿರ ರೂ.ಗಳಿಗಿಂತ ಹೆಚ್ಚು ಹಣವನ್ನು ನೀಡಿದವರ ಹೆಸರು ಮತ್ತು ವಿಳಾಸಗಳು

(ಮುಂದುವರೆದುದು)

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೫೨೫. | ಶ್ರೀ ಕೆ.ಎಲ್. ತಿಪ್ಪೇಸ್ವಾಮಿ<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೫೨೬. | ಶ್ರೀ ಹೆಚ್.ಟಿ. ಬೋಗೇಶ್<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೫೨೭. | ಶ್ರೀ ರಾಮರಾಜು<br>ಪ್ರ.ಶಾ.ಸ. | ೧,೦೦೧.೦೦ |
| | ಕ್ರ.ಸಂ. ೫೨೫ ರಿಂದ ೫೨೭ರವರೆಗಿನ ವಿಳಾಸಗಳು<br>ಶ್ರೀ ನೆಹರು ಗ್ರಾಮಾಂತರ ಪ್ರೌಢಶಾಲೆ,<br>ಆದಿವಾಲ, ಚಿತ್ರದುರ್ಗ ಜಿಲ್ಲೆ. | |
| ೫೨೮. | ಶ್ರೀ ಆರ್.ಹೆಚ್. ನೀಲಕಂಠಯ್ಯ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಸಂಸ್ಕೃತ ಪಾಠಶಾಲೆ<br>ಬ್ಯಾಲಕೆರೆ, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೫೨೯. | ಶ್ರೀ ಕೆ.ಹೆಚ್. ಶಿವರುದ್ರಯ್ಯ<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೫೩೦. | ಶ್ರೀ ಕೆ. ಗಂಗನರಸಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೩೧. | ಶ್ರೀ ಹೆಚ್.ಎನ್. ಮಹಾಂತೇಶಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೩೨. | ಶ್ರೀ ಡಿ.ಬಿ. ಚಂದ್ರಶೇಖರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೩೩. | ಶ್ರೀ ಕೆ. ಸಿದ್ಧಲಿಂಗಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೩೪. | ಶ್ರೀ ಗಂಗನರಸಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೩೫. | ಶ್ರೀ ಡಿ.ಹೆಚ್. ಗಂಗಾಧರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೩೬. | ಶ್ರೀ ಎಸ್. ನಟರಾಜು<br>ಹಿಂದಿ ಪಂಡಿತರು | ೧,೦೦೧.೦೦ |
| ೫೩೭. | ಶ್ರೀ ಜಿ. ಶಿವಣ್ಣ<br>ಹಿಂದಿ ಪಂಡಿತರು | ೧,೦೦೧.೦೦ |
| ೫೩೮. | ಶ್ರೀ ಗಂಗಾಧರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೩೯. | ಶ್ರೀ ಪಿ.ಆರ್. ಸೋಮಶೇಖರಯ್ಯ<br>ಕನ್ನಡ ಪಂಡಿತರು | ೧,೦೦೧.೦೦ |
| ೫೪೦. | ಶ್ರೀ ಗಂಗಾಧರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೫೪೧. | ಶ್ರೀ ವಿ. ಶ್ರೀನಿವಾಸಮೂರ್ತಿ<br>ಸಹ ಶಿಕ್ಷಕರು | ೧,೦೦೧.೦೦ |
| ೫೪೨. | ಶ್ರೀ ಜಿ.ಕೆ. ಕುಮಾರಸ್ವಾಮಿ<br>ಸಹ ಶಿಕ್ಷಕರು | ೧,೦೦೧.೦೦ |
| ೫೪೩. | ಶ್ರೀಮತಿ ಎಂ.ಬಿ. ಸಂಧ್ಯಾ<br>ಸಹ ಶಿಕ್ಷಕರು | ೧,೦೦೧.೦೦ |
| ೫೪೪. | ಶ್ರೀ ಸೋಮಶೇಖರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೪೫. | ಶ್ರೀ ಜಿ. ಬಸವರಾಜಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೪೬. | ಶ್ರೀ ಮಲ್ಲಿಕಾರ್ಜುನ<br>ಸಹ ಶಿಕ್ಷಕರು | ೧,೦೦೧.೦೦ |
| ೫೪೭. | ಶ್ರೀಮತಿ ಇಸರತ್ ಉನ್ನೀಸಾ<br>ಸಹ ಶಿಕ್ಷಕರು | ೧,೦೦೧.೦೦ |
| ೫೪೮. | ಶ್ರೀಮತಿ ಆರ್. ಜಯಮ್ಮ<br>ಸಹ ಶಿಕ್ಷಕರು | ೧,೦೦೧.೦೦ |
| ೫೪೯. | ಶ್ರೀ ರುದ್ರೇಶಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೫೦. | ಶ್ರೀ ರೇವಣಸಿದ್ಧಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೫೧. | ಶ್ರೀ ಹೆಚ್. ಸೋಮಶೇಖರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೫೨. | ಶ್ರೀ ಕೆ. ಸಿದ್ಧಬಸವಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೫೩. | ಶ್ರೀ ಕೆ.ಬಿ. ಶಿವಶಂಕರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೫೪. | ಶ್ರೀ ಎಸ್. ರುದ್ರೇಶ್<br>ಸಹ ಶಿಕ್ಷಕರು | ೧,೦೦೧.೦೦ |
| ೫೫೫. | ಶ್ರೀ ಎಂ. ನಂದೀಶ್<br>ಸಹ ಶಿಕ್ಷಕರು | ೧,೦೦೧.೦೦ |
| ೫೫೬. | ಶ್ರೀಮತಿ ಎಂ.ಸಿ. ಶೈಲಜಾ<br>ಸಹ ಶಿಕ್ಷಕರು | ೧,೦೦೧.೦೦ |
| | ಕ್ರ.ಸಂ. ೫೨೩ ರಿಂದ ೫೫೬ರವರೆಗಿನ ವಿಳಾಸಗಳು<br>ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ,<br>ಶ್ರೀ ಸಿದ್ಧಗಂಗಾಮಠ, ತುಮಕೂರು ತಾಲ್ಲೂಕು. | |

*(ಮುಂದುವರಿಯುತ್ತದೆ)*

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೫೫೭. | ಶ್ರೀ ಹೆಚ್. ಸುರೇಶ್<br>ಸಹ ಶಿಕ್ಷಕರು | ೧,೦೦೧.೦೦ |
| ೫೫೮. | ಶ್ರೀ ಎನ್.ಜಿ. ಚಿದಾನಂದಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೫೯. | ಶ್ರೀ ಸಿ. ವೀರಭದ್ರಯ್ಯ<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೫೬೦. | ಶ್ರೀ ಪರಮೇಶ್ವರಯ್ಯ<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೫೬೧. | ಶ್ರೀ ಬಿ.ಎಸ್. ಶಂಕರ್<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೫೬೨. | ಶ್ರೀ ಹೆಚ್. ಮೃತ್ಯುಂಜಯ<br>ವೃ. ಶಿಕ್ಷಕರು | ೧,೦೦೧.೦೦ |
| ೫೬೩. | ಶ್ರೀ ಬಿ. ಸಿದ್ಧರಾಮಯ್ಯ<br>ಪ್ರಥಮ ದರ್ಜೆ ಸಹಾಯಕರು | ೧,೦೦೧.೦೦ |
| ೫೬೪. | ಶ್ರೀ ಕೆ.ಬಿ. ಯತಿರಾಜು<br>ದ್ವಿತೀಯ ದರ್ಜೆ ಸಹಾಯಕರು | |
| ೫೬೫. | ಶ್ರೀ ಆರ್.ಎಸ್. ಮಲ್ಲೇಶಪ್ಪ<br>ಟೈಪಿಸ್ಟ್ | ೧,೦೦೧.೦೦ |
| ೫೬೬. | ಶ್ರೀ ಎಸ್. ಹುಚ್ಚಯ್ಯ<br>ದ್ವಿತೀಯ ದರ್ಜೆ ಸಹಾಯಕರು | |
| ೫೬೭. | ಶ್ರೀ ಎಂ. ಗಂಗಾಧರಯ್ಯ<br>ಪ್ರ.ಶಾ.ಸ. | ೧,೦೦೧.೦೦ |
| ೫೬೮. | ಶ್ರೀ ಸಿ.ಎಂ. ಬಸವರಾಜು<br>ಪ್ರ.ಶಾ.ಸ. | ೧,೦೦೧.೦೦ |
| ೫೬೯. | ಶ್ರೀ ರಾಜಯ್ಯ<br>ಡಿ. ಗ್ರೂಪ್ ನೌಕರರು | ೧,೦೦೧.೦೦ |
| ೫೭೦. | ಶ್ರೀ ಡಿ.ಕೆ. ನರಸಿಂಹಮೂರ್ತಿ<br>ಡಿ. ಗ್ರೂಪ್ ನೌಕರರು | ೧,೦೦೧.೦೦ |

ಕ್ರ.ಸಂ. ೫೫೭ ರಿಂದ ೫೭೦ರವರೆಗಿನ ವಿಳಾಸಗಳು
ಶ್ರೀ ಸಿದ್ಧಲಿಂಗೇಶ್ವರ ಸನಿವಾಸ ಪ್ರೌಢಶಾಲೆ,
ಶ್ರೀ ಸಿದ್ಧಗಂಗಾಮಠ, ತುಮಕೂರು ತಾಲ್ಲೂಕು.

| ಕ್ರ.ಸಂ. | ಹೆಸರು ಮತ್ತು ವಿಳಾಸ | ಮೊತ್ತ |
|---|---|---|
| ೫೭೧. | ಶ್ರೀ ಎಂ.ವಿ. ಶಿವರುದ್ರಯ್ಯ<br>ಕನ್ನಡ ಪಂಡಿತರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೫೭೨. | ಶ್ರೀ ಹೆಚ್. ರುದ್ರಪ್ಪ<br>ದೈಹಿಕ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಹುಲಿಕಲ್, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೫೭೩. | ಶ್ರೀ ಬಿ.ಆರ್. ರಾಜಶೇಖರ್<br>ಸಹ ಶಿಕ್ಷಕರು,<br>ಶ್ರೀ ಬಸವೇಶ್ವರ ಪ್ರೌಢಶಾಲೆ,<br>ಸೋಲೂರು, ಮಾಗಡಿ ತಾಲ್ಲೂಕು. | ೧,೦೦೧.೦೦ |
| ೫೭೪. | ಶ್ರೀ ಕೆ.ಬಿ. ಚನ್ನಬಸವಶೆಟ್ಟಿ<br>ಸಹ ಶಿಕ್ಷಕರು,<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ತುಮಕೂರು. | ೧,೦೦೧.೦೦ |
| ೫೭೫. | ಶ್ರೀ ಎನ್.ಪಿ. ನಾಗರಾಜು<br>ಪಾ.ಶಾ.ಸ.<br>ಶ್ರೀ ಸಿದ್ಧಗಂಗಾ ಪ್ರೌಢಶಾಲೆ,<br>ತುಮಕೂರು. | ೧,೦೦೧.೦೦ |
| ೫೭೬. | ಶ್ರೀ ಸರ್ವಕಾಂತ<br>ಡಿ. ಗ್ರೂಪ್ ನೌಕರರು<br>ಶ್ರೀ ಸಿದ್ಧಗಂಗಾ ಗ್ರಾ. ಪ್ರೌಢಶಾಲೆ,<br>ರಘುವನಹಳ್ಳಿ,<br>ಬೆಂಗಳೂರು ದಕ್ಷಿಣ ತಾಲ್ಲೂಕು. | ೧,೦೦೧.೦೦ |
| ೫೭೭. | ಶ್ರೀ ನಾರಾಯಣಪ್ಪ<br>ಮುಖ್ಯ ಶಿಕ್ಷಕರು | ೧,೦೦೧.೦೦ |
| ೫೭೮. | ಶ್ರೀ ಟಿ.ಸಿ. ಶಿವಕುಮಾರ್<br>ಸಹ ಶಿಕ್ಷಕರು | ೧,೦೦೧.೦೦ |
| ೫೭೯. | ಶ್ರೀ ಎಂ.ಸಿ. ಲಿಂಗಪ್ಪ<br>ಸಹ ಶಿಕ್ಷಕರು | ೧,೦೦೧.೦೦ |
| ೫೮೦. | ಶ್ರೀ ಆರ್.ಆರ್. ಚಂದ್ರಶೇಖರಯ್ಯ<br>ಸಹ ಶಿಕ್ಷಕರು | ೧,೦೦೧.೦೦ |
| ೫೮೧. | ಶ್ರೀ ಬಿ.ಪಿ. ದಕ್ಷಿಣಮೂರ್ತಿ<br>ಸಹ ಶಿಕ್ಷಕರು | ೧,೦೦೧.೦೦ |
| ೫೮೨. | ಶ್ರೀ ಎಸ್.ವಿ. ಲೋಕೇಶ್<br>ಸಹ ಶಿಕ್ಷಕರು | ೧,೦೦೧.೦೦ |
| ೫೮೩. | ಶ್ರೀ ಎಸ್. ನಾಗರಾಜು<br>ದೈಹಿಕ ಶಿಕ್ಷಕರು | ೧,೦೦೧.೦೦ |
| ೫೮೪. | ಶ್ರೀ ಚಿ. ತಿಮ್ಮೇಗೌಡ<br>ವೃ. ಶಿಕ್ಷಕರು | ೧,೦೦೧.೦೦ |
| ೫೮೫. | ಶ್ರೀ ಡಿ.ಪಿ. ಸಿದ್ಧಲಿಂಗಯ್ಯ<br>ದ್ವಿತೀಯ ದರ್ಜೆ ಸಹಾಯಕರು | ೧,೦೦೧.೦೦ |
| ೫೮೬. | ಶ್ರೀ ಜಿ. ಪಾಲನೇತ್ರ<br>ಪ್ರಾ.ಶಾ.ಸ. | ೧,೦೦೧.೦೦ |
| ೫೮೭. | ಶ್ರೀ ಎಂ.ಎಸ್. ರಾಜಣ್ಣ<br>ಸೇವಕರು | ೧,೦೦೧.೦೦ |
| ೫೮೮. | ಶ್ರೀ ನರಸಿಂಹಮೂರ್ತಿ<br>ಸೇವಕರು | ೧,೦೦೧.೦೦ |

ಕ್ರ.ಸಂ. ೫೭೭ ರಿಂದ ೫೮೮ರವರೆಗಿನ ವಿಳಾಸಗಳು
ಶ್ರೀ ಜಗದ್ಗುರು ರೇವಣಸಿದ್ಧೇಶ್ವರ ಗ್ರಾಮಾಂತರ ಪ್ರೌಢಶಾಲೆ,
ಎಣ್ಣೇಗೆರೆ, ಮಾಗಡಿ ತಾಲ್ಲೂಕು.

(ಮುಂದುವರಿಯುತ್ತದೆ)

RNI No. 17139/69 "Siddaganga" Monthly - postal Reg.No. KA/SK/TMR/385/2003-05



ಜೂನ್ ೭ರಂದು ಆರ್.ಪಿ.ಸಿ. ಲೇ ಔಟ್‌ನಲ್ಲಿ ಏರ್ಪಡಿಸಿದ್ದ ಬಸವ ಜಯಂತಿ ಮತ್ತು ಗುರುವಂದನ ಮಹೋತ್ಸವವನ್ನು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಶಾಸಕರಾದ ವಿ. ಸೋಮಣ್ಣ ಅವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಶ್ರೀ ಶ್ರೀ ಪಟ್ಟದ ರೇಣುಕ ಶಿವಾಚಾರ್ಯ ಸ್ವಾಮಿಗಳವರು, ಶ್ರೀ ಶ್ರೀ ಶಿವರುದ್ರ ಮಹಾಸ್ವಾಮಿಗಳವರು, ಸಚಿವರಾದ ಡಾ. ಮಾಲಕರೆಡ್ಡಿ, ಶ್ರೀಮತಿ ರಾಣಿ ಸತೀಶ್, ಅ.ಭಾ.ವೀ.ಮ. ಕಾರ್ಯದರ್ಶಿ ಶ್ರೀ ಬಿ.ಎಸ್. ಪರಮಶಿವಯ್ಯ ಮೊದಲಾದ ಗಣ್ಯರು ಉಪಸ್ಥಿತರಿದ್ದರು.



ಜೂನ್ ೭ರಂದು ಆರ್.ಪಿ.ಸಿ. ಲೇ ಔಟ್‌ನಲ್ಲಿ ಏರ್ಪಡಿಸಿದ್ದ ಬಸವ ಜಯಂತಿ ಮತ್ತು ಗುರುವಂದನ ಮಹೋತ್ಸವ ಸಂದರ್ಭದಲ್ಲಿ ಹಿರಿಯ ವಿದ್ವಾಂಸರು, ಸಿದ್ಧಗಂಗಾ ಮಾಸ ಪತ್ರಿಕೆಯ ಪ್ರಧಾನ ಸಂಪಾದಕರೂ ಆದ ಪಂಡಿತ ಚನ್ನಪ್ಪ ಎರೇಸೀಮೆ ಅವರನ್ನು ಪರಮಪೂಜ್ಯ ಶ್ರೀ ಶ್ರೀಗಳವರು ಶಾಲುಹೊದಿಸಿ ಆಶೀರ್ವದಿಸಿದರು.